# "ಅಮರೇಶನುಗಡೋಣಿ ಅವರ ಕತೆಗಳು - ಒಂದು ಅವಲೋಕನ"

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಆಂಶಿಕ ಅಗತ್ಯಕ್ಕಾಗಿ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ




~~೨೦೧೦-೨೦೧೧~~

೨೦೦೯-೨೦೧೦

# "ಅಮರೇಶನುಗಡೋಣಿ ಅವರ ಕತೆಗಳು - ಒಂದು ಅವಲೋಕನ"

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಆಂಶಿಕ ಅಗತ್ಯಕ್ಕಾಗಿ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ




೨೦೧೦-೨೦೧೧

# ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

ಎರಡುಸಾವಿರ ವರ್ಷಗಳ ಚರಿತ್ರೆ ಹೊಂದಿರುವ ನಮ್ಮ ಕನ್ನಡ ನಾಡಿನ ಸಾಹಿತ್ಯವು ಒಂದು ಭವ್ಯ ಪರಂಪರೆಯಾಗಿ ಬೆಳೆದು ಬಂದಿದೆ. ಪಂಪನಿಂದ ಕುವೆಂಪುವರೆಗೆ ಸಾಹಿತ್ಯ ಬೆಳೆದು ಬಂದ ದಾರಿ ವೈವಿಧ್ಯಮಯವಾಗಿದೆ. ಕನ್ನಡ ಸಾಹಿತ್ಯವು ಪ್ರಾಚೀನ ಕನ್ನಡ, ಹಳೆಗನ್ನಡ, ನಡುಗನ್ನಡಗಳನ್ನು ದಾಟಿ ಮುಂದೆ ಹೊಸಗನ್ನಡಕ್ಕೆ ಪಾದರ್ಪಣೆ ಮಾಡಿದಾಗ ಇಡೀ ಸಾಹಿತ್ಯ ಸ್ವರೂಪವೇ ಬದಲಾಯಿತು.

ಅಂದಿನವರೆಗೂ ಧರ್ಮದ ಅವಿಭ್ಯಾಜ ಅಂಗದಂತಿದ್ದು, ರಾಜಾಶ್ರಯದ ನೆರಳಲ್ಲೇ ಬೆಳೆದಿದ್ದ ಸಾಹಿತ್ಯ ಪರಿವರ್ತನೆಯ ಪ್ರವಾಹಕ್ಕೆ ಸಿಲುಕಿ ಹೊಸ ಚಿಂತನೆ ಪ್ರಭಾವಗಳಿಗೆ ಮುಕ್ತ ಮನಸ್ಸಿನಿಂದ ತೆರೆದುಕೊಂಡಿತು. ಹೊಸಗನ್ನಡ ಸಾಹಿತ್ಯವು ಕಾವ್ಯ, ಭಾವಗೀತೆ, ಕಾದಂಬರಿ, ನಾಟಕ, ಸಣ್ಣಕತೆ, ಲಲಿತ ಪ್ರಬಂಧ, ವಿಮರ್ಶೆ, ಆತ್ಮಚರಿತ್ರೆ, ಪ್ರವಾಸ ಕಥನ ಹೀಗೆ ವಿವಿಧ ಪ್ರಕಾರಗಳಲ್ಲಿ ಕವಲೊಡೆದು ಬೆಳೆಯಿತು. ಸಣ್ಣಕತೆಯು ಸಹ ಮಹತ್ವದ ಪ್ರಕಾರವಾಗಿದೆ.

ಹೊಸಗನ್ನಡ ಸಾಹಿತ್ಯವು ನವೋದಯ ಪ್ರಗತಿಶೀಲ, ನವ್ಯ ಮತ್ತು ದಲಿತ ಬಂಡಾಯ ಕಾಲಘಟ್ಟಗಳಲ್ಲಿ ಬೆಳೆದು ಬಂದಿದೆ. ಕಾಲ, ಸಂದರ್ಭ, ಸನ್ನಿವೇಶ, ಧ್ಯೇಯಧೋರಣೆಗಳಿಗೆ ಅನುಸಾರವಾಗಿ ಕಥಾ ಸಾಹಿತ್ಯ ಬೆಳೆದು ಬಂದಿತು. ಲೇಖಕರ ಸೈದ್ಧಾಂತಿಕ ಧೋರಣೆ, ತಾತ್ವಿಕತೆ ಸಂವೇದನೆಗಳ ಅಭಿವ್ಯಕ್ತಿ ಭಾವನೆಗಳು ಮಿಡಿತ ತುಡಿತಗಳಿಗೆ ಅವರ ಸಣ್ಣ ಕತೆಗಳು ಸಾಕ್ಷಿಯಾಗಿವೆ. ಕನ್ನಡದಲ್ಲಿ ಪಂಜೇಮಂಗೇಶರಾಯರು ಮೊದಲಗೊಂಡು ಅನೇಕರು ಸಣ್ಣ ಕತೆ ಬರೆದರೂ ಸಹ ಆಧುನಿಕ ಜಗತ್ತು ಕಥಾ ಸಾಹಿತ್ಯವನ್ನು ಭಾರತೀಯ ಪರಂಪರೆಯ ಹಿನ್ನೆಲೆಯಲ್ಲಿ ವಿಕಾಸಗೊಳಿಸಿದ ಶ್ರೇಯಸ್ಸು ಮಾಸ್ತಿವೆಂಕಟೇಶ ಅಯ್ಯಂಗಾರರಿಗೆ ಸಲ್ಲಬೇಕು. ಆದ್ದರಿಂದಲೇ ಮಾಸ್ತಿಯನ್ನು ಕನ್ನಡದ 'ಸಣ್ಣಕತೆಗಳ ಜನಕ' ಎಂದೇ ಕರೆಯಲಾಗುತ್ತದೆ. ಕನ್ನಡದಲ್ಲಿ ಸಣ್ಣ ಕತೆಗಳು ರೂಪುಗೊಳ್ಳಲು ಪಾಶ್ಚಾತ್ಯ ಸಾಹಿತ್ಯದ ಪ್ರಭಾವ, ಪ್ರೇರಣೆ ಸಾಕಷ್ಟಿವೆ.

ಕಥಾ ಪ್ರಪಂಚವನ್ನು ಸ್ವಾರಸ್ಯಕರವಾಗಿ ವಿಶಿಷ್ಟ ರೀತಿಯಲ್ಲಿ ವಿಸ್ತರಿಸಿದ ಮಾಸ್ತಿಯವರು ಮಾಸ್ತಿ ಕನ್ನಡದ ಆಸ್ತಿ ಎಂಬಂತೆ ಮನೆಮಾತಾದರು. ಪಂಜೇಮಂಗೇಶರಾಯರು, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಕೆರೂರು ವಾಸುದೇವಾಚಾರ್ಯ, ಬಾಗಲೋಡಿ ದೇವರಾಯ, ಆನಂದ, ಶ್ರೀಪತಿಯಂತಹ ಪ್ರಮುಖ ಲೇಖಕರ ಚಿಂತನೆಗಳು ಹಾಗೂ ಸುಧಾರಣಾ ವಾದಿ ಧೋರಣೆಗಳಿಂದ ಸಣ್ಣ ಕತೆಗಳು ಭದ್ರ ನೆಲೆಕಂಡವು.

ಕನ್ನಡ ಕಥಾ ಸಾಹಿತ್ಯ ನಾಲ್ಕು ಕಾಲಘಟ್ಟಗಳಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯದಲ್ಲಿ ಬೆಳವಣಿಗೆಯನ್ನು ಕಂಡುಕೊಂಡಿತು. ನವೋದಯ ಕತೆಗಾರರು ದೇಶ ಪ್ರೇಮ, ಕನಸುಗಾರಿಕೆ ಆದರ್ಶಮಯತೆ ಅವರ ಸಾಹಿತ್ಯದ ಆಶಯವಾಗಿತ್ತು. ನವೋದಯದವರ ಧೋರಣೆ, ಕಲ್ಪನೆ, ಕನಸುಗಾರಿಕೆ ಆದರ್ಶಮಯತೆಯನ್ನು ವಿರೋಧಿಸುತ್ತಲೇ ಪ್ರಗತಿಶೀಲ ಕಥಾ ಸಾಹಿತ್ಯ ಬೆಳೆಯಿತು. ವಾಸ್ತವ ಬದುಕು ಸಾಮಾಜಿಕ, ಆರ್ಥಿಕ, ಅಸಮಾನತೆ, ಸಂಘರ್ಷ ಹಾಗೂ ಸಮತಾವಾದದ ಸಿದ್ಧಾಂತದ ಹಿನ್ನೆಲೆಯಲ್ಲಿ ಪ್ರಗತಿಶೀಲರ ಕಥಾ ಸಾಹಿತ್ಯ ನೆಲೆನಿಂತಿತು. ನವ್ಯ ಕಥಾ ಸಾಹಿತ್ಯವು ವ್ಯಕ್ತಿ ಕೇಂದ್ರಿತ ನೆಲೆಯಲ್ಲೇ ರೂಪುಗೊಂಡಿತು. ಅನಾಥ ಪ್ರಜ್ಞೆ, ಕಾಮ, ಹತಾಶೆ, ನಿರಾಶೆ, ಭ್ರಮನಿರಸನ ಭಾವನೆ, ಏಕಾಕಿತನ, ಪರಕೀಯತೆಗಳೇ ಅವರ ಕತೆಗಳಲ್ಲಿ ವಿಜೃಂಭಿಸಿದವು. 70ರ ದಶಕದಲ್ಲಿ ದಲಿತ ಬಂಡಾಯ ಸಾಹಿತ್ಯವು ಚಳುವಳಿಯ ರೂಪದಲ್ಲಿ ಬೆಳೆದು ಬಂದು ಈಗಲೂ ಪ್ರಸ್ತುತವಾಗಿದೆ. 'ಬಂಡಾಯ' ಅಂದರೆ ವರ್ಗ, ವರ್ಣ, ಲಿಂಗ ತಾರತಮ್ಯ ಶೋಷಣೆ ಅಸಮಾನತೆಯ ವಿರುದ್ಧ ಸಿಡಿದೇಳುವುದೇ ಆಗಿದೆ. ಕೆಳವರ್ಗದ ಜನರ ನೋವು, ಹತಾಶೆ, ಹಸವಿನ ತೀವ್ರತೆ ಶೋಷಣೆಗಳು ಮನಕರುಗುವಂತೆ ಚಿತ್ರಿತವಾಗಿವೆ. ಜೀವಪರ ಸಾಹಿತ್ಯವೆಂದೇ ಹೆಸರಾದ ದಲಿತ ಬಂಡಾಯ ಸಾಹಿತ್ಯದಲ್ಲಿ ಪ್ರದೇಶಗಳು ಬೇರೆ ಬೇರೆಯಾದರು ಶೋಷಣೆಯ ಸ್ವರೂಪ ಒಂದೇಯಾಗಿದೆ. ಮೈಸೂರು ಪ್ರಾಂತ್ಯ, ಕರಾವಳಿ ಭಾಗ, ಮಧ್ಯ ಕರ್ನಾಟಕ, ಹೈದರಾಬಾದ್ ಕರ್ನಾಟಕ ಹೀಗೆ ಎಲ್ಲೆಲ್ಲಿ ಆರ್ಥಿಕ ಅಸಮಾನತೆ ಶೋಷಣೆ ಇರುತ್ತದೆಯೋ ಅದಕ್ಕೆ ವಿರುದ್ಧವಾದ ಪ್ರತಿಭಟನೆಯನ್ನು ವ್ಯಕ್ತಪಡಿಸುವುದು ಈ ಸಾಹಿತ್ಯದ ಕರ್ತವ್ಯವಾಗಿದೆ.

ಮೈಸೂರು ಪ್ರಾಂತ್ಯದಂತೆಯೇ ಹೈದರಾಬಾದ್ ಕರ್ನಾಟಕ ಭಾಗದಲ್ಲೂ ದಲಿತ ಬಂಡಾಯ ಸಾಹಿತ್ಯ ಹುಲುಸಾಗಿಯೇ ಬೆಳೆಯಿತು. ಶಾಂತರಸರ ಪ್ರಭಾವದಿಂದಾಗಿ ಈ ಭಾಗದ ಸಾಹಿತ್ಯಕ್ಕೆ ಜೀವ ಕಳೆ ಬಂದಿತು. ಆ ಭಾಗದಲ್ಲಿ ಅಮರೇಶ್‌ನುಗಡೋಣಿ ಪ್ರತಿಭಾವಂತ ಕತೆಗಾರರು. ನುಗಡೋಣಿಯವರು ರಾಯಚೂರು ಜಿಲ್ಲೆಯ ಮಾನವಿ ತಾಲ್ಲೂಕಿನ ಹಳ್ಳಿಗಾಡಿನ ಸಾಮಾನ್ಯರ ಬದುಕನ್ನೆ ಭಿತ್ತಿಯನ್ನಾಗಿ ಮಾಡಿಕೊಂಡು ಕತೆ ಬರೆದವರು. ಬಡವರ ಕಷ್ಟದಾಯಕ ಜೀವನ, ಶ್ರೀಮಂತರ, ಭೂಮಾಲೀಕರ ನಿಷ್ಠುರುಣೆಯ ದೌರ್ಜನ್ಯ, ಸಾಂಸ್ಕೃತಿಕ ಪಲ್ಲಟಗಳು ಸಂಬಂಧಗಳ ಗಾಢತೆ ಇವರ ಕಥೆಗಳಲ್ಲಿ ಮುಖ್ಯ ಅಂಶವಾಗಿ ಕಂಡುಬರುತ್ತವೆ. ನುಗಡೋಣಿಯವರ ಕತೆಗಳ ಮೇಲೆ ದಲಿತ ಬಂಡಾಯ ಚಳುವಳಿ ಅಂಬೇಡ್ಕರರ ಶಿಕ್ಷಣ, ಸಂಘಟನೆ, ಹೋರಾಟದ ತತ್ವಗಳು ಕೆಲವೆಡೆ ನವ್ಯದ ಪ್ರಭಾವ ಕಂಡುಬರುತ್ತವೆ. ವರ್ಗ ಸಂಘರ್ಷ, ವರ್ಣ ಸಂಘರ್ಷವನ್ನು ಬಿಂಬಿಸುವ ಕಾರ್ಲ್‌ಮಾರ್ಕ್ಸ್‌ರವರ ಪ್ರಭಾವವು ಕಂಡುಬರುತ್ತವೆ.

ಇವರ ಕತೆಗಳು ಕನ್ನಡದ ಸಾಹಿತ್ಯ ವಲಯದಲ್ಲಿ ಹೊಸ ಹುರಪನ್ನು ತಂದಿವೆ. ರೆಹಮತ್ ತರೀಕೆರೆಯವರು "ಅಮರೇಶ್ ಕತೆಗಳನ್ನು ಓದುವುದೆಂದರೆ ಜೀವವನ್ನು ತಲ್ಲಣದೊಳಗೆ ಇಕ್ಕಿದಂತೆ.

ಹೈದರಾಬಾದ್ ಕರ್ನಾಟಕದ ಫ್ಯೂಡಲ್ ಲೋಕದಲ್ಲಿರುವ ಉಸಿರುಗಟ್ಟಿಸುವಂತಹ ಬಾಳನ್ನು ಅವರ ಕತೆಗಳು ಹಾಗೆಯೇ ಕಾಣಿಸುತ್ತವೆ. ಆದರೆ ಇಂತಹ ಒತ್ತಡಗಳಿದ್ದರೂ ಜೀವಗಳು ಉಸಿರಾಡುತ್ತವೆ. ತಮ್ಮೆದುರಿನ ವಾಸ್ತವವನ್ನು ಮುಖಬೆಲೆ ಮಾಡುತ್ತವೆ. ಪ್ರತಿ ಶಕ್ತಿಗಳಾಗಿ ಬೆಳೆಯುತ್ತವೆ. ಇದನ್ನೆಲ್ಲ ಕತೆಗಾರ ಸಹಜವಾಗಿ ಸರಳೀಕರಣ ಮಾಡದೆ ಆಸ್ತೆಯಿಂದ ಚಿತ್ರಿಸುತ್ತಾರೆ" ಎಂದು ಹೇಳುತ್ತಾರೆ. (ಮಣ್ಣಸೇರಿತು ಬೀಜ ಸಂಕಲನಕ್ಕೆ ಬರೆದ ಮುನ್ನುಡಿ) ರೆಹಮತ್ ತರೀಕೆರೆಯವರ ಈ ಅಭಿಪ್ರಾಯವು ಅಮರೇಶ್ ನುಗಡೋಣಿಯವರ ಕಥಾ ಸಾಹಿತ್ಯದ ಮುಖ್ಯ ಆಶಯಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತದೆ.

ಪುರುಷೋತ್ತಮ ಬಿಳಿಮಲೆಯವರು ಹೇಳುವಂತೆ "ಅಮರೇಶ್ ನುಗಡೋಣಿ ಈಗ ಬರೆಯುತ್ತಿರುವ ಕತೆಗಾರರಲ್ಲಿ ತೀರಾ ವಿಶಿಷ್ಟ ಕತೆಗಾರರಾಗಿದ್ದಾರೆ. ಇಂಡಿಯಾದ ಯಾವುದೇ ಊರಿನಲ್ಲಿರಬಹುದಾದ ಹೆಂಗಸರು, ಮಕ್ಕಳು, ಮುದಕರು, ಮುದಕಿಯರು, ರೋಗಿಗಳು, ದಲಿತರು, ಜಾತಿವಾದಿಗಳೂ ಈ ಪುಟ್ಟ ಊರಲ್ಲಿಯೇ ಇದ್ದು ಅಮರೇಶರ ಕತೆಗಳಲ್ಲಿ ಮರುಹುಟ್ಟು ಪಡೆಯುತ್ತಾರೆ". (ಮಣ್ಣುಸೇರಿತು ಬೀಜ ಮುನ್ನುಡಿ 1997)

ಈ ಅನಿಸಿಕೆಯು ಅಮರೇಶ ನುಗಡೋಣಿಯವರ ಕಥಾ ಸಾಹಿತ್ಯದ ಆಶಯ, ಶೋಷಣೆಯ ಮೂಲ ನೆಲೆಯಿಂದಲೇ ಅಭಿವ್ಯಕ್ತವಾಗುವಂತಹವು. ಪಾತ್ರಗಳು ಆಯಾ ಭಾಗದ ಮಣ್ಣಿನ ಜೀವ ಸತ್ವದಿಂದಲೇ ಮೈತಳೆದು ನಿಲ್ಲುತ್ತವೆ ನವೋದಯದ ಕಲ್ಪನಾತ್ಮಕತೆ, ಆದರ್ಶಮಯತೆ, ಭಾವನಾತ್ಮಕತೆಯ ಜೊತೆಜೊತೆಗೆ ನವ್ಯದ ಅನಾಥತೆ, ಏಕಾಕಿತನ ಅಂಶಗಳು ಸಹ ಪೂರಕವಾಗಿ ಮೂಡಿಬರುತ್ತವೆ. ಸಾಮಾಜಿಕ ವಿಷಮತೆ ಕತೆಯಲ್ಲಿ ಪೂರಕವಾಗಿ ಮೂಡಿಬರುತ್ತವೆ. ಈ ಹಿನ್ನೆಲೆಯಲ್ಲಿ ಜೀವನಪರ ಸಾಹಿತ್ಯ ಸೃಷ್ಟಿಗೆ ಅಮರೇಶ ನುಗಡೋಣಿಯವರ ಕೊಡುಗೆ ಮಹತ್ವದ್ದು.

ಹಲವು ತಲೆಮಾರುಗಳಿಂದ ಹಣಬಲ, ಭುಜಬಲವುಳ್ಳ ಹಾಗೆಯೇ ಜಾತಿಯಿಂದ ಮೇಲುತುದಿಯಲ್ಲಿರುವ ಸಾಮಾಜವು ಮುಗ್ಧ ಅಮಾಯಕರನ್ನು ಹೇಗೆ ಮಟ್ಟ ಹಾಕಲು ವ್ಯವಸ್ಥಿತವಾಗಿ ಪ್ರಯತ್ನಿಸುತ್ತದೆ. ಕೆಳವರ್ಗದವರಿಗೆ ಯಾವ ಅವಕಾಶಗಳು ನೆಮ್ಮದಿಯ ಬಾಳು ಸಿಗದಂತೆ ವಂಚಿಸುತ್ತಾ ಅವರ ಬಾಳನ್ನು ನರಕಗೊಳಿಸುತ್ತದೆ ಬದುಕಿನುದ್ದಕ್ಕೂ ಸೋತು ಸುಣ್ಣವಾಗಿ ಕೊನೆಗೆ ಪ್ರಧಾನ ಸಂಸ್ಕೃತಿಯ ವಿರುದ್ಧ ನಡೆಸುವ ಹೋರಾಟದ ತೀವ್ರತೆಯನ್ನು ಅದರಲ್ಲಿ ಉಂಟಾಗುವ ಸೋಲು-ಗೆಲವುಗಳನ್ನು ಕಲಿಸುತ್ತಾ ಕೊನೆಯಲ್ಲಿ ಬದಲಾವಣೆಯ ಆಶಯದೊಂದಿಗೆ ಅಂತ್ಯ ಕಾಣುತ್ತದೆ.

## ಅಧ್ಯಯನ ವ್ಯಾಪ್ತಿ

ಈ ದಶಕದ ಪ್ರಮುಖ ಕತೆಗಾರರಾದ "ಅಮರೇಶನುಗಡೋಣಿಯವರ ಕತೆಗಳು- ಒಂದು ಅವಲೋಕನ" ಶೀರ್ಷಿಕೆಯಡಿಯಲ್ಲಿ ಏಳು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಮೊದಲನೆ ಅಧ್ಯಾಯನದ ಉದ್ದೇಶ ಮತ್ತು ವ್ಯಾಪ್ತಿಗೆ ಸಂಬಂಧಿಸಿದ್ದಾಗಿದೆ. ಎರಡನೇ ಅಧ್ಯಾಯ ಅಮರೇಶ್ ನುಗಡೋಣಿಯವರ 'ಜೀವನ ಮತ್ತು ವ್ಯಕ್ತಿತ್ವ'ದಲ್ಲಿ ನುಗಡೋಣಿಯವರ ಕಥೆಗಳಲ್ಲಿ ದಟ್ಟವಾದ ಜೀವಾನುಭವಗಳು ಅರಳುಗಟ್ಟಿದ ಭಾವನೆಗಳು, ಅಂತರಂಗದ ತುಮಲಗಳು ಹಾಗೂ ಸಾಮಾಜಿಕ ತಲ್ಲಣಗಳನ್ನು ಕುರಿತ ಅಧ್ಯಯನವಾಗಿದೆ. ಬದುಕಿನಲ್ಲಿ ಕಂಡ ಸಿಹಿಕಹಿಗಳೇ ಕಥಾ ಕುಸುಮಗಳಾಗಿ ಅಲ್ಲಿ ಅರಳಿವೆ. ನೋವನ್ನುಂಡೇ ಕಥನ ಬರೆದವರಲ್ಲಿ ಅಮರೇಶನುಗಡೋಣಿ ಸಹ ಒಬ್ಬರು. ಈ ಹಿನ್ನಲೆಯಲ್ಲಿ ಈ ಅಧ್ಯಾಯವನ್ನು ವಿವರಿಸಲಾಗಿದೆ.

ಮೂರನೆ ಅಧ್ಯಾಯ 'ಅಮರೇಶನುಗಡೋಣಿಯವರ ಕತೆಗಳ' ವಸ್ತು ವಿಶ್ಲೇಷಣೆ ಇವರ ಕತೆಗಳ ವಸ್ತು ಅಶ್ರಯಕ್ಕನುಸಾರವಾಗಿ ಪ್ರತಿಭಟನೆಯ ಜಾಡುಗಳು ದಲಿತ ಜನಾಂಗದ ನೋವು, ಹತಾಶೆ, ಅವಮಾನಗಳು, ಕ್ರೌರ್ಯ, ದಬ್ಬಾಳಿಕೆ, ಕಾಮುಕತೆ, ಸಣ್ಣತನವನ್ನು ಚಿತ್ರಿಸಿರುವ ಬಗೆಯನ್ನು ವಿಶ್ಲೇಷಿಸಲಾಗುತ್ತದೆ. ನುಗಡೋಣಿಯವರ ಕತೆಗಳಲ್ಲಿ ಧಾರ್ಮಿಕತೆಯು ಹಾಸುಹೊಕ್ಕಾಗಿದೆ. ರಾಯಚೂರು ಭಾಗದ ಹಬ್ಬ ಹರಿದಿನ, ಜಾತ್ರೆ, ಉತ್ಸವಗಳು, ಸಂಪ್ರದಾಯಗಳು ಕತೆಗಳಲ್ಲಿ ಕಂಡು ಬರುತ್ತವೆ. ಈ ಧಾರ್ಮಿಕ ವೈರುಧ್ಯಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಬಂಧ, ಕೌಟುಂಬಿಕ ಸಂಬಂಧ, ಲೈಂಗಿಕ ಸಂಬಂಧ ಕುರಿತಂತೆ ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ 'ಅಮರೇಶನುಗಡೋಣಿಯವರ ಕತೆಗಳಲ್ಲಿ ಪ್ರಾದೇಶಿಕತೆಯ ಚಿತ್ರಣ' ಕುರಿತು ಅಧ್ಯಯನ ನಡೆಸಲಾಗಿದೆ. ಇವರ ಕತೆಗಳಲ್ಲಿ ಉತ್ತರ ಕರ್ನಾಟಕದ ಬಿಸಿಲು, ಬಡತನ, ನಿರುದ್ಯೋಗ, ಹಸಿವು, ಬರಗಾಲ ಇಂತಹ ಜೀವನ ಚಿತ್ರವನ್ನು ಅವಲೋಕಿಸಲಾಗಿದೆ.

ಐದನೇ ಅಧ್ಯಾಯದಲ್ಲಿ 'ಅಮರೇಶನುಗಡೋಣಿಯವರ ಕತೆಗಳಲ್ಲಿ ಪಾತ್ರ ವಿಶೇಷತೆ' ಕುರಿತು ವಿಶ್ಲೇಷಿಸಲಾಗಿದೆ. ಕೆಲವು ಪಾತ್ರಗಳು ಬಂದೂಕನ್ನು ಕೈಗೆತ್ತಿಕೊಂಡು ವ್ಯವಸ್ಥೆಯ ವಿರುದ್ಧ ಸಿಡಿದಿದ್ದರೆ ಇನ್ನೂ ಕೆಲವು ಪಾತ್ರಗಳು ತಣ್ಣನೆಯ ಪ್ರತಿಭಟನೆ ನಡೆಸುತ್ತವೆ. ಹಸಿವಿನ ತೀವ್ರತೆ ಹೆಚ್ಚಾಗಿ ಕಂಡು ಬರದಿದ್ದರೂ ಸಹ ಹೋರಾಟದ ಚಿತ್ರಣವನ್ನು ಕಾಣಬಹುದು. ಆರ್ಥಿಕ ಅಸಮಾನತೆಯಿಂದ ಉಂಟಾದ ಸಮಸ್ಯೆಗಳಿಂದಾಗಿ ಪಾತ್ರಗಳು ಹೋರಾಟದ ಹಾದಿ ಹಿಡಿಯುತ್ತವೆ ಎಂಬುದನ್ನು ಸವಿಸ್ತಾರವಾಗಿ ವಿವರಿಸಲಾಗಿದೆ.

ಆರನೇ ಅಧ್ಯಾಯದಲ್ಲಿ 'ಅಮರೇಶನುಗಡೋಣಿಯವರ ಕತೆಗಳಲ್ಲಿ ಭಾಷೆ ಮತ್ತು ಶೈಲಿ ವಿಶಿಷ್ಟತೆಯನ್ನು ಗುರುತಿಸಲಾಗಿದೆ. ಭಾಷೆಯಲ್ಲಿ ಶಿಷ್ಟ ಮತ್ತು ಆಡುಭಾಷೆ ಎಂಬ ಎರಡು ಭೇದಗಳಿವೆ. ಜನರು ತಮ್ಮ ಹಳ್ಳಿಗಳ ಮನೆಯಲ್ಲಿ ಆಡುವ ಭಾಷೆಯನ್ನು ಕೇವಲ ವ್ಯವಹಾರಿಕವಾಗಿ ಬಳಸದೆ ಸಾಹಿತ್ಯದ ವಿಶಿಷ್ಟ ಅಭಿವ್ಯಕ್ತಿಯಾಗಿಯೂ ಬಳಸುವಂತಾಗಬೇಕು. ನುಗಡೋಣಿಯವರು ದಲಿತ ಜಗತ್ತನ್ನು ಇದ್ದಂತೆಯೇ ಕರಾರುವಕ್ಕಾಗಿ ತೋರಿಸಲು ಬಳಸಿಕೊಂಡ ಭಾಷೆಯ ಅಭಿವ್ಯಕ್ತಿ ಕ್ರಮ ಅನನ್ಯವಾದದ್ದು. ದಲಿತೇತರ ಲೇಖಕರು ದಲಿತ ಜಗತ್ತನ್ನು ಪ್ರವೇಶಿಸಿ ಅದರ ಅಂತಃಸತ್ವವನ್ನು ತೆರೆದಿಡುವಂತಹ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಇವರು ಕಥನದ ಅಭಿವ್ಯಕ್ತಿಗೆ ಶಿಷ್ಟ ಭಾಷೆಗಿಂತ ಜನಸಾಮಾನ್ಯರ ಆಡುಭಾಷೆಯನ್ನೇ ಬಳಸಿಕೊಂಡಿದ್ದಾರೆ. ರಾಯಚೂರು ಜಿಲ್ಲೆಯ ಹಳ್ಳಿಗಳ ಭಾಷೆಯ ಸೊಗಡು ಕತೆಗಳಲ್ಲಿ ಮೇಳೈಯಿಸಿವೆ. ಹೀಗೆ ಭಾಷೆಯ ವಿಶಿಷ್ಟತೆಯನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

## ಅಧ್ಯಾಯ - ೨

# ಅಮರೇಶ ನುಗಡೋಣಿಯವರ ಜೀವನ ವ್ಯಕ್ತಿತ್ವ

ನಮ್ಮ ಕನ್ನಡ ಸಾಹಿತ್ಯಕ್ಕೆ 'ಉತ್ತರ ಕರ್ನಾಟಕ' ನೀಡಿದ ಕೊಡುಗೆ ಅತ್ಯಮೂಲ್ಯವಾದುದು. ಸಾಹಿತ್ಯ ವಲಯದಲ್ಲಿ ತೀರಾ ಅವಜ್ಞೆಗೊಳಗಾದರೂ ಈ ಭಾಗದ ಸಾಹಿತ್ಯ ತನ್ನದೇ ಆದ ಅಂತಃಸತ್ವದಿಂದ ಕೂಡಿದ್ದು, ಸಾಹಿತ್ಯ ವಲಯದಲ್ಲಿ ಅನುಪಮವಾದ ಸಂಚಲನವನ್ನುಂಟು ಮಾಡಿದೆ. ಹೈದರಾಬಾದ್ ಪ್ರಾಂತ್ಯದ ಸಾಹಿತ್ಯದಲ್ಲಿ ಮೇರು ಸದೃಶ್ಯ ವ್ಯಕ್ತಿಯೆನಿಸಿದ 'ಶ್ರೀ ಶಾಂತರಸರ' ಪ್ರಭಾವಕ್ಕೆ ಒಳಗಾದ ಅಮರೇಶ ನುಗಡೋಣಿಯವರು ಈ ಶತಮಾನದ ಹೊಸ ತಲೆಮಾರಿನ ಮುಖ್ಯ ಬರಹಗಾರರಲ್ಲಿ ಒಬ್ಬರು. ಇವರು ಕನ್ನಡ ಸಾಹಿತ್ಯಕ್ಕೆ ಅತ್ಯಮೂಲ್ಯ ಕೊಡುಗೆ ನೀಡಿದ್ದಾರೆ. ಕಥಾ ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸಿ ಉತ್ತರ ಕರ್ನಾಟಕದ ಗ್ರಾಮೀಣ ಬದುಕಿನ ಲಯವನ್ನು ಸೂಕ್ಷ್ಮವಾಗಿ ಗ್ರಹಿಸಿ ತಮ್ಮ ಕಥೆಯಲ್ಲಿ ನಿರೂಪಿಸುವ ಸೃಜನಶೀಲ ಬರಹಗಾರರು. ತಮ್ಮ ಸುತ್ತಲಿನ ಪರಿಸರ, ಅಲ್ಲಿನ ಜೀವನ, ಜನರ ನೋವು-ನಲಿವುಗಳನ್ನು, ಅವರ ಭಾಷೆ ನುಡಿಗಟ್ಟುಗಳನ್ನು ಗ್ರಹಿಸಿ ಹಳ್ಳಿಗಾಡಿನ ಭಾಷೆಯ ಸೊಗಡನ್ನು ಸಶಕ್ತವಾಗಿ ಬಿಂಬಿಸುವ ಅವರ ಸೃಜನಶೀಲತೆ, ಕಲಾನೈಪುಣ್ಯತೆ ಹೇಳತೀರದು.

ಅಮರೇಶ ನುಗಡೋಣಿಯವರ ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ನುಗಡೋಣಿಯಲ್ಲಿ ೧೯೬೦ರಲ್ಲಿ ಜನಿಸಿದರು. ಸಿರವಾರದಲ್ಲಿ ಪ್ರಾಥಮಿಕ, ಪ್ರೌಢಶಿಕ್ಷಣ ಪಡೆದು ರಾಯಚೂರಿನಲ್ಲಿ ಪದವಿ ಶಿಕ್ಷಣ ಪೂರೈಸಿ, ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಸ್ನಾತಕೋತ್ತರ ಪದವಿ ಪಡೆದರು. ಇವರು ಮಹಾರಾಷ್ಟ್ರದ ಅಕ್ಕಲಕೋಟೆ, ಸಿಂಧನೂರು, ಬೀದರ್, ರಾಯಚೂರುಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೯೨ರಿಂದ ಕನ್ನಡ ವಿಶ್ವವಿದ್ಯಾನಿಲಯ ಹಂಪಿಯಲ್ಲಿ ಕನ್ನಡ ಅಧ್ಯಾಪಕರಾಗಿ ಪ್ರಸ್ತುತ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದಲ್ಲಿ ಪ್ರವಾಚಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ನುಗಡೋಣಿಯವರ ಕಥೆಗಳಲ್ಲಿ ದಟ್ಟವಾದ ಜೀವನ ಅನುಭವಗಳಿವೆ. ಹರಳುಗಟ್ಟಿದ ಭಾವನೆಗಳ ಲಾಲಿತ್ಯವಿದೆ. ಅಂತರಂಗದ ತುಮಲಗಳಿವೆ. ಸಮಾಜದ ಅನೇಕ ರೀತಿಯ ತಲ್ಲಣಗಳಿವೆ. ಬದುಕಿನಲ್ಲಿ ಕಂಡುಂಡ ಸಿಹಿಕಹಿಗಳೇ ಕಥಾ ಕುಸುಮಗಳಾಗಿ ಅರಳಿವೆ. ನೋವನ್ನುಂಡೆ ಕಥಾ ಸಾಹಿತ್ಯ ಬರೆದವರಿವರು.

ಅಮರೇಶರು ಜಾತಿ, ಮತ, ತತ್ವ, ಸಿದ್ಧಾಂತ ಎಲ್ಲವನ್ನು ಮೀರಿ ಬೆಳೆದವರು. ಕಥೆಗಳಲ್ಲಿ ಸಮಾಜದಲ್ಲಿ ತೀರಾ ತುಳಿತಕ್ಕೊಳಪಟ್ಟವರ ನೋವು, ಹತಾಶೆ, ದುಃಖ, ಸಂಕಟಗಳನ್ನು ಕಥಾ ವಸ್ತುವಾಗಿ ತೆಗೆದುಕೊಂಡು ಬರೆದವರು. ದೊಡ್ಡವರ ಸಣ್ಣತನವನ್ನು, ಸಣ್ಣವರ ದೊಡ್ಡತನವನ್ನು ಪರಿಣಾಮಕಾರಿಯಾಗಿ

ಚಿತ್ರಿಸಿದ್ದಾರೆ. ಕಥೆಗಳಲ್ಲಿ ಜನಜೀವನದ ವಾಸ್ತವ ಬದುಕನ್ನು ಕಣ್ಣಿಗೆ ಕಟ್ಟುವಂತೆ ನಿರಾಡಂಬರ ಶೈಲಿಯಲ್ಲಿ ನಿರೂಪಿಸಿದ್ದಾರೆ. ಸೋತವರು, ನೊಂದವರೇ ಇವರ ಕಥೆಗಳಲ್ಲಿ ಪ್ರಮುಖ ಸ್ಥಾನ ಪಡೆದು ಪಾತ್ರಗಳಾಗಿ ಜೀವ ಪಡೆದಿವೆ.

ಟಿ.ಪಿ. ಅಶೋಕರವರು "ಒಂದು ಕಾಲದಲ್ಲಿ, ದೇಶದಲ್ಲಿ ಜನ ಹೀಗೆ ಬದುಕಿದ್ದರು ಎನ್ನುವಂತಹ ಸ್ಥಗಿತ ಚಿತ್ರಗಳನ್ನು ಸಾಂಸ್ಕೃತಿಕ ದಾಖಲೆ ಎಂಬಂತೆ ನಮ್ಮ ಮುಂದೆ ಪೇರಿಸುತ್ತಾ ಹೋಗುವುದಿಲ್ಲ. ಅವರು ಚಿತ್ರಿಸುವ ಹಳ್ಳಿಗಳು ದೊಡ್ಡ ಪಟ್ಟಣಗಳಿಂದ ಬಹುದೂರದಲ್ಲಿವೆ ನಿಜ. ಆದರೆ ಅವು ಬಾಹ್ಯ ಸಂಪರ್ಕವೇ ಇಲ್ಲದ ಮುಗ್ಧ ಸ್ಥಿತಿಯಲ್ಲೇನೂ ಇಲ್ಲ. ಹೊರ ಜಗತ್ತಿನ ಎಲ್ಲಾ ವಿದ್ಯಮಾನಗಳೂ ಈ ಹಳ್ಳಿಗಳನ್ನು ಬೇರೆ ಬೇರೆ ರೀತಿಯಲ್ಲಿ ಪ್ರವೇಶಿಸಿ ಪ್ರಭಾವಿಸುತ್ತವೆ....."[೧]

ಅಮರೇಶರು ಬೌದ್ಧಿಕ ಪರಿಸರದಲ್ಲಿ, ಸಾಹಿತ್ಯದ ವಾತಾವರಣದಲ್ಲಿ ಬೆಳೆಯದಿದ್ದರೂ ಮಾನವೀಯತೆ ತುಂಬಿದ ಕೂಡು ಕುಟುಂಬದ ಪರಿಸರದಲ್ಲಿ ಬೆಳೆದಿರುವ ಅವರು ಭೂಮಿ, ದನಕರುಗಳು ವ್ಯವಸಾಯವೇ ಮುಖ್ಯ ಕಸುಬುಗಳಾಗಿರುವ ಮನೆತನದಲ್ಲಿ ಬೆಳೆದವರು. ಬಡತನದ ಕೂಡು ಕುಟುಂಬದಲ್ಲಿ ನುಗಡೋಣಿಯವರು ನಿಧಾನ ಗತಿಯಲ್ಲಿ ಶಿಕ್ಷಣ ಮುಗಿಸಿದವರು. ಅವರ ವಿದ್ಯಾಭ್ಯಾಸವನ್ನು ಕುರಿತು ಹೀಗೆ ಹೇಳುತ್ತಾರೆ. "ಓದುವ ಅವಕಾಶ ಸಿಕ್ಕಿತು, ಕುಟುಂತ್ತಾ ಪದವಿ ಮುಗಿಸಿದೆ ಅಷ್ಟೇ. ಸಾಹಿತ್ಯದ ಓದು, ಬರಹ ಕೇವಲ ಆಕಸ್ಮಿಕವಾಗಿ ದಕ್ಕಿದ ಅವಕಾಶ ಅಷ್ಟೇ. ಆರಂಭದಲ್ಲಿ ಕಾದಂಬರಿಗಳನ್ನು ಓದಿದೆ. ಅವುಗಳನ್ನು ಕುರಿತು ಚರ್ಚೆ ಮಾಡಲಿಲ್ಲ. ವಿಮರ್ಶೆಗೆ ಹೋಗಲಿಲ್ಲ. ಕಥೆ ಬರೆಯುವುದಕ್ಕೆ ತೊಡಗಿದೆ. ವಿಸ್ತಾರವಾದ ಓದು ನನ್ನದಲ್ಲ. ವಿಮರ್ಶೆ, ಸಂಶೋಧನೆ, ಅಧ್ಯಯನ ಎಂದರೇನು ಎಂಬ ಪ್ರಾಥಮಿಕ ತಿಳುವಳಿಕೆ ಬಂದದ್ದೇ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಬಂದ ಮೇಲೆ."[೨].... ಈ ರೀತಿಯಲ್ಲಿ ತಮ್ಮ ಉನ್ನತಿ ಹಿರಿಮೆ ಗರಿಮೆಯನ್ನು ತೋರ್ಪಡಿಸದೆ ಸರಳ, ಸಜ್ಜನಿಕೆಯಿಂದ ಎಲ್ಲರ ಮೆಚ್ಚುಗೆ ಗೌರವಕ್ಕೆ ಪಾತ್ರರಾಗಿರುವ ನುಗಡೋಣಿಯವರು ಇಂದು ಉತ್ತರ ಕರ್ನಾಟಕದ ಮೇರು ಸಾಹಿತಿಯಾಗಿ ಸಹೃದಯರ ಮನದಾಳದಲ್ಲಿ ನೆಲೆಯೂರಿದ್ದಾರೆ.

ಇಂದು 'ಉತ್ತರ ಕರ್ನಾಟಕ' ಜಾಗತೀಕರಣದ ಸುಳಿಯಲ್ಲಿ ಸಿಲುಕಿ ಗಣಿಗಾರಿಕೆಯಿಂದ ನುಜ್ಜುಗುಜ್ಜಾಗಿ ಅನೇಕ ಬಿಕ್ಕಟ್ಟನ್ನು ಎದುರಿಸುತ್ತಿದೆ. ಆದರೂ ಅಮರೇಶರು ತಮ್ಮ ಪರಿಸರದಲ್ಲಿ ಇಂದಲ್ಲಾ ನಾಳೆ ಹೊಸ ಬಾಳು ತೆರೆದಿತು ಎನ್ನುವ ನಿರೀಕ್ಷೆಯಲ್ಲಿ ಕಥನ ಬರೆಯುತ್ತಿದ್ದಾರೆ. ಅವರ ಕಥನ ಮಣ್ಣಸೇರಿತು ಬೀಜ (೧೯೯೧), ತಮಂಧದಕೇಡು (೧೯೯೭), ಮುಸ್ಸಂಜೆಯ ಕಥಾನಕಗಳು (೨೦೦೪), ಸವಾರಿ

(೨೦೦೭), ಕಥೆಗಳು ಅರಿವು (೧೯೯೪), ಈ ಸಂಕಲನಗಳು ಓದುಗರ ಕಲ್ಪನೆಗೆ ಮೀರಿದ ಅನುಭವಗಳನ್ನು ನೀಡುತ್ತಲೇ ಹೊಸ ಲೋಕವೊಂದನ್ನು ಮರುಸೃಷ್ಟಿ ಮಾಡಿದ ಮಹಾನ್‌ಲೇಖಕರು.

ಅಮರೇಶರು ವಿದ್ಯಾಭ್ಯಾಸದ ನಂತರದ ದಿನಗಳಲ್ಲಿ ತಮ್ಮ ಕಥಾ ಸಂಕಲನ ಪ್ರಕಟವಾಗುವ ಸಂದರ್ಭವನ್ನು ಕುರಿತು ಹೀಗೆ ಹೇಳಿಕೊಳ್ಳುತ್ತಾರೆ. "ಎಂ.ಎ. ಪಾಸಾದ ಮೇಲೆ ಉದ್ಯೋಗವಿಲ್ಲದೆ ಹೈದರಾಬಾದ್ ಕರ್ನಾಟಕವೆಂಬ ಉರಿ ಬಿಸಿಲು ನಾಡಿನ ಊರುಗಳಲ್ಲಿ ನೆಲೆಯಿಲ್ಲದೆ ಮುಖ ಬಾಡಿಸಿಕೊಂಡು ತಿರುಗುತ್ತಿದ್ದೆ. ತಿರುಗುವಾಗ ಎಲ್ಲಿಯಾದರೂ ಆತ್ಮೀಯ ಸ್ನೇಹಿತರು ಸಿಕ್ಕರೆ ಅವರಲ್ಲೇ ನಾಕಾರು ದಿನ ತಳವೂರಿ ಸುಮ್ಮನೆ ಏನಾದರೂ ಯೋಚಿಸುತ್ತಾ ಕಾಲಕಳೆಯುತ್ತಿದ್ದೆ. ಏನಾದರೂ ಯೋಚಿಸುವುದು ಎಂದರೆ, ಅದು ನಾನು ಬರೆಯುವ ಕಥೆಗಳನ್ನೇ ಕುರಿತಾಗಿರುತ್ತಿತ್ತು. ಅಲ್ಲೇ ಸಾಧ್ಯವಾದಷ್ಟು ಸಿಕ್ಕರೆ ಅಲ್ಲಿಷ್ಟು ಬರೆದು ಮುಗಿಸುತ್ತಿದ್ದೆ. ಬರೆದ ಕಥೆಗಳನ್ನು ಪಕ್ಕದಲ್ಲಿರುತ್ತಿದ್ದ ಸ್ನೇಹಿತರಿಗೆ ತೋರಿಸುತ್ತಿದ್ದೆ. ಓದಿದ ಕೂಡಲೇ ಪತ್ರಿಕೆಗಳಿಗೆ ಕಳುಹಿಸಲು ಒತ್ತಾಯಿಸುತ್ತಿದ್ದರು. ಒಂದೆರೆಡು ಕಥೆಗಳನ್ನು ಸ್ನೇಹಿತರೇ ಮುಂದೆ ನಿಂತು ಕಳುಹಿಸಿದರು. ಈ ಕಥೆಗಳು ಪ್ರಕಟವಾಗಿ ಬಹುಮಾನ ಪಡೆದು ಒಂದಷ್ಟು ಹಣವನ್ನು ತಂದವು. ನಿರುದ್ಯೋಗಿಯಾಗಿದ್ದ ನನಗೆ ಸಂತೋಷವಾಯಿತು. ಮುಂದೆ ಸ್ನೇಹಿತರೇ ಕೂಡಿ ೧೯೯೧ರಲ್ಲಿ 'ಮಣ್ಣಸೇರಿತು ಬೀಜ' ಎಂಬ ಹೆಸರಿನಿಂದ ಕಥಾಸಂಕಲನವನ್ನು ಪ್ರಕಟಿಸಿದರು"[3] ಎಂದು ಕೃತಜ್ಞತಾ ಭಾವನೆಯಿಂದ ಹೇಳಿಕೊಂಡಿದ್ದಾರೆ.

ಅಮರೇಶರು ಲೋಕದಲ್ಲಿ ಕಂಡದ್ದನ್ನು ನವೀರಾದ ನಿರೂಪಣಾ ಶೈಲಿಯಲ್ಲಿ ತಮ್ಮ ಕಥೆಗಳಲ್ಲಿ ಹೊಸ ಲೋಕವನ್ನು ಸೃಷ್ಟಿಸಿದವರು. ಅಲ್ಲದೆ ಅವರ ಕಥೆಗಳು ಓದುಗನ ಹೃದಯ ತಟ್ಟುತ್ತಾ ಅಲ್ಲಿನ ಪರಿಸರ ಪಾತ್ರಗಳು, ಸನ್ನಿವೇಶಗಳು ಇವೆಲ್ಲವು ಓದುಗನ ಕಲ್ಪನೆಗೆ ಮೀರಿದ ಅನುಭವವನ್ನು ನೀಡುತ್ತಲೇ ಹೊಸ ಲೋಕವನ್ನು ಕಣ್ಮುಂದೆ ತೆರೆದಿಡುತ್ತಾರೆ. ತಮ್ಮ ಬಾಲ್ಯ ಕಾಲದ ಅನುಭವಗಳನ್ನು ಮರುಕಳಿಸುತ್ತಾ ಅವರ ಕಥೆಗಳನ್ನು ಬರೆದವರು. ಅವರು ತಮ್ಮ ಊರನ್ನು ಕುರಿತು ಹೀಗೆ ಹೇಳುತ್ತಾರೆ "ನನ್ನೂರು ಚಿಕ್ಕದು, ಊರುಕೇರಿ ಸೇರಿಕೊಂಡು ಹತ್ತಾರು ಮನೆಗಳು, ನೂರಾರು ಜನಅಷ್ಟೇ" ನೋಟಿನ ಮೂಲಕ ವ್ಯವಹಾರ ಕಮ್ಮಿ. ಕಾಳು ಕಡಿಗಳೇ ವ್ಯವಹಾರದಲ್ಲಿ ಹಣದ ಬದಲು ಬಳಕೆಯಾಗುತ್ತಿದ್ದವು. ವರ್ಷಕ್ಕೆ ಆಗುವಷ್ಟು ಕಾಳುಕಡಿಗಳು ಮನೆಯಲ್ಲಿಟ್ಟುಕೊಂಡವರೇ ಸಂತೃಪ್ತರು. ಕಸುಬುದಾರರಿಗೆ (ಕೆಲಸಗಾರರಿಗೆ) ಕಾಳುಕಡಿಗಳನ್ನೇ ಅಳೆದು ಕೊಡಲಾಗುತ್ತಿತ್ತು. ಅಷ್ಟೇ ಅಲ್ಲ ನಮ್ಮೂರಿಗೆ ಬಂದು ನೆಲೆಸಿದ್ದ ವೈದ್ಯನಿಗೂ ಅಪ್ಪ ಭತ್ತವನ್ನೇ ಅಳೆದುಕೊಡುತ್ತಿದ್ದ. ವರ್ಷಕ್ಕೆವೊಮ್ಮೆ ಊರುಕೇರಿಯಲ್ಲಿ "ಕೈಗಡ" ಎನ್ನುವ ಕೊಡು ಕೊಳ್ಳುವ ಸಂಬಂಧ ಜೀವಂತಿಕೆಯಿಂದ ಕೂಡಿತ್ತು."[4]

ತನ್ನ ಸುತ್ತಲ ಪರಿಸರವನ್ನೇ ಕಥೆಯಾಗಿಸಿ ಓದುಗರ ಮೆಚ್ಚುಗೆಗಳಿಸಿದ ಲೇಖಕರು ತಾವು ಕಥೆ ಬರೆಯುವ ಹವಣಿಕೆಯನ್ನು ಹೀಗೆ ಓದುಗರ ಮುಂದೆ ತೆರೆದಿಟ್ಟಿದ್ದಾರೆ. "ನಾನು ಕಥೆ ಬರೆಯಲು ತುಂಬಾ ಕಷ್ಟಪಡ್ತೀನಿ. ಒಂದು ವಿಷಯ, ಘಟನೆ, ಸಂಗತಿ, ತತ್ವವನ್ನು ಕಥೆಯ ರೂಪದಲ್ಲಿ ಕಲ್ಪಿಸಿಕೊಳ್ಳುವಾಗ ನಾನು ಸಹಜ ಸ್ಥಿತಿಯಲ್ಲಿ ಉಳಿಯುವುದಿಲ್ಲ. ದೀರ್ಘಕಾಲ ಕಥೆಯನ್ನು ಮನಸ್ಸಿನಲ್ಲಿ ಕಟ್ಟುತ್ತಾ, ಮುರಿಯುತ್ತಾ, ನೋಡುತ್ತಾ ಇದ್ದು, ಒಮ್ಮೆ ಬರೆಯಲು ಕುಳಿತರೆ ಆಗಲು ಬೇಗ ಬರೆದು ಮುಗಿಸುವುದಿಲ್ಲ. ಸ್ವಲ್ಪಸ್ವಲ್ಪ ಬರೆಯುತ್ತಾ ವಾರಗಟ್ಟಲೆ ಬರೆಯುತ್ತಲೇ ಇರುತ್ತೀನಿ. ದಿನದ ಯಾವುದೋ ಸಮಯದಲ್ಲಿ ಒಂದು ಪುಟ ಬರೆದು ದಣಿದು ಕೈಬಿಡುತ್ತೇನೆ. ಆದ್ರಾ ಬೇರೆ ಯಾವುದೇ ಕೆಲಸ ಮಾಡಲು ಆಗುವುದಿಲ್ಲ. ಒಂದೇ ಪಟ್ಟಿಗೆ ಕೂಂತು ಬರೆಯಲು ಆಗದೆ ಒದ್ದಾಡುತ್ತೇನೆ."[3] ಯಾವುದೇ ಕಥೆಗಾರನಿಗೆ ಇಮೇಜ್ ಒಂದು ವರ. ಕಥೆಗಾರನಿಗೆ ಅದು ದೊಡ್ಡ ಶಕ್ತಿ ಕೊಡುವುದು. ಅದನ್ನು ಕಾಪಾಡಿಕೊಳ್ಳಲು ಕಥೆಗಾರ ಹಲವು ರೀತಿಯಲ್ಲಿ ಪ್ರಯತ್ನಿಸುತ್ತಾನೆ. ಆದರೆ ಅಮರೇಶರಿಗೆ ಇಮೇಜ್‌ಗಿಂತ ಕಥೆಯಲ್ಲಿ ಮನುಷ್ಯನ ಸುಖವನ್ನು ಕುರಿತು ಕಥೆಬರೆದವರಲ್ಲ. ಮನುಷ್ಯನ ಬವಣೆಗಳನ್ನು, ನೋವು ನಲಿವುಗಳನ್ನು ಹೈದರಾಬಾದ್ ಪ್ರಾಂತ್ಯದ ಜಾಗತೀಕರಣದ ದಾಳಿಗೆ ಸಿಲುಕಿ ನಲಗುತ್ತಿರುವ ಸನ್ನಿವೇಶಗಳನ್ನು, ಭೂ ರಹಿತರನ್ನು, ದುಡಿಯುವವರನ್ನು, ಶೋಷಿತ ಮಹಿಳೆಯರನ್ನು ಕುರಿತು ಕಥೆ ಬರೆದವರು. ಇವರು ಸ್ಥಳೀಯ ವಿದ್ಯಮಾನಗಳನ್ನು ಮುಕ್ತವಾಗಿ ಗ್ರಹಿಸಿ ಕಥಾ ಸಂರಚನೆ ಮಾಡಿರುತ್ತಾರೆ.

ಅಮರೇಶರು ಜೀವನಶೈಲಿ ಆಧುನಿಕ ಶೈಲಿಯದ್ದಾಗಿರಲಿಲ್ಲ. ಹಳ್ಳಿಯಲ್ಲೇ ಹುಟ್ಟಿ ಬೆಳೆದು ಉದ್ಯೋಗ ದೊರಕಿದರೂ, ನಗರಗಳ ಸಾಮೀಪ್ಯತೆ ಇದ್ದರೂ ಸಹ ಬೇಸಾಯ ಮರೆತವರಲ್ಲ. ಅಮರೇಶರು ತಮ್ಮನ್ನು ಕುರಿತು ಒಂದು ಸಂದರ್ಶನದಲ್ಲಿ ಹೀಗೆ ಹೇಳಿಕೊಳ್ಳುತ್ತಾರೆ "....ನಾನೇ ಹಳ್ಳಿಗ.ನನ್ನ ಹೆಂಡತಿ ಮಗ ನನ್ನ'ಹಳ್ಳಿ ಮನುಷ್ಯನಂಗ ಇದ್ದಿದ್ದೀ ನೋಡು ಎಂದು ಕಾಮೆಂಟ್ ಮಾಡ್ತಾರ' ನಾನು ಹಳ್ಳಿಯಲ್ಲೇ ಹುಟ್ಟಿ ಬೆಳೆದ ಕಾರಣ ಹಳ್ಳಿತನ ಮೈಗೂಡಿದೆ. ನನ್ನ ಕಥೆಗಳಿಗೆ ಇದು ಕಾರಣವಾಗಿರಬೇಕು."[4] ಇಂತಹ ಸರಳ ಜೀವನ ನಡೆಸಿದ ಅದ್ಭುತ ಕಥೆಗಾರ ಅಮರೇಶರು ಎನ್ನುವಲ್ಲಿ ಹುರುಳಿಲ್ಲ.

ನುಗಡೋಣಿಯವರು ಹೈದಾರಾಬಾದ್ ಕರ್ನಾಟಕದ ಅಪ್ಪಟ ಹಳ್ಳಿಯ ಭಾಷೆ, ವೈವಿಧ್ಯತೆಯ ಶೈಲಿ ಕಥಾವಸ್ತು, ಕಥನ ತಂತ್ರ, ನಿರೂಪಣಾ ವಿಧಾನ, ಬಂಡಾಯದ ಧೋರಣೆ, ದಲಿತ ಸಂವೇದನೆ, ಉಗ್ರ ತಣ್ಣನೆಯ ಪ್ರತಿಭಟನೆಯಿಂದ ಗಮನ ಸೆಳೆಯುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಪ್ರಾದೇಶಿಕ ನಿಷ್ಠತೆ ನಿಖರತೆಯ ದೃಷ್ಟಿಯಿಂದ ಹೈದಾರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಅಮರೇಶ್ ನುಗಡೋಣಿ ಮಹತ್ವದ ಕಥೆಗಾರರಾಗಿದ್ದಾರೆ. ಆಧುನಿಕತೆಯ ಸವಾಲುಗಳನ್ನು ಸ್ವೀಕರಿಸಿ, ಸೂಕ್ಷ್ಮ ಸಂವೇದನೆಗಳೊಂದಿಗೆ ಸ್ಪಂದಿಸುವ

ಅಪರೂಪದ ಕಥೆಗಾರ ಇವರು 'ತಮ್ಮ ಸತ್ವಯುತ ಸೃಜನಶೀಲತೆಯಿಂದಲೇ ಕನ್ನಡ ಸಾಹಿತ್ಯಕ್ಕೆ ಮೌಲಿಕವಾದ ಕೊಡುಗೆ ನೀಡಿದ್ದಾರೆ'.

## ಸಾಹಿತ್ಯ ಕೃಷಿ

**ಕಥಾ ಸಂಕಲನಗಳು**

೦೧. ಮಣ್ಣಸೇರಿತು ಬೀಜ (೧೯೯೧)

೦೨. ಅರಿವು (ನವಸಾಕ್ಷರರಿಗಾಗಿ ಕಥೆಗಳು ೧೯೯೪)

೦೩. ಬಿಸಿಲ ಹನಿಗಳು (ಹೈದರಾಬಾದ್ ಕರ್ನಾಟಕದ ಪ್ರಾತಿನಿಧಿಕ ಕಥಾಸಂಕಲನದ ಸಂಪಾದನೆ)

೦೪. ತಮಂಧದ ಕೇಡು (೧೯೯೭)

೦೫. ಮುಸ್ಸಂಜೆಯ ಕಥಾನಕಗಳು (೨೦೦೪)

೦೬. ಸವಾರಿ (೨೦೦೭)

**ಕಾವ್ಯ**

೦೧. 'ನೀವು ಅವರು ಪರಿಸರ' (ಕವನ ಸಂಕಲನ ೧೯೯೨)

**ವಿಮರ್ಶೆ**

೦೧. ಶ್ರೀ ಕೃಷ್ಣ ಆಲನಹಳ್ಳಿ (೧೯೯೫)

೦೨. ಹೈದರಾಬಾದ್ ಪ್ರಾಂತ್ಯದ ಹಾಡುಪಾಡು (೨೦೦೩)

**ಪ್ರಶಸ್ತಿಗಳು**

ಮಣ್ಣಸೇರಿತು ಬೀಜ ಮತ್ತು ತಮಂಧದಕೇಡು ಸಂಕಲನಕ್ಕೆ ಬಂದ ಪ್ರಶಸ್ತಿಗಳ ಪಟ್ಟಿ

೦೧. ೧೯೮೯ ದಿ॥ ಜಯತೀರ್ಥ ರಾಜಪುರೋಹಿತ ಸ್ಮಾರಕದತ್ತಿ ಕಥಾ ಪ್ರಶಸ್ತಿ

೦೨. ೧೯೯೧ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

೦೩. ೧೯೯೧ ಚುಕ್ಕಿ ಉಮಾಪತಿ ಪ್ರತಿಷ್ಠಾನ ಪ್ರಶಸ್ತಿ

೦೪. ೧೯೯೧ ಪುಸ್ತಕ ಬಹುಮಾನ ಗುಲ್ಬರ್ಗ ವಿಶ್ವವಿದ್ಯಾಲಯ

೦೫. ೧೯೯೫ ಸರ್.ಎಂ. ವಿಶ್ವೇಶ್ವರಯ್ಯ ಪ್ರತಿಷ್ಠಾನ ಪ್ರಶಸ್ತಿ

೦೬. ೧೯೯೬ ವರ್ಧಮಾನ ಉದಯೋನ್ಮುಖ ಸಾಹಿತ್ಯ ಪ್ರಶಸ್ತಿ

೦೭. ೧೯೯೭ ಉಗ್ರಾಣ ಸಾಹಿತ್ಯ ಪ್ರಶಸ್ತಿ

ಅಮರೇಶ ನುಗಡೋಣಿಯವರು ಇದುವರೆಗೆ ಆರು ಕಥಾ ಸಂಕಲನಗಳಿಂದಲೇ ಸಾಹಿತ್ಯ ವಲಯದಲ್ಲಿ ಭದ್ರ ನೆಲೆ ಕಂಡುಕೊಂಡಿದ್ದಾರೆ. ಕನ್ನಡ ಕಥಾ ಸಾಹಿತ್ಯ ಮುಂದಿನ ದಿನಗಳಲ್ಲಿ ಅವರಿಂದ ಮತ್ತಷ್ಟು ಫಸಲನ್ನು ನಿರೀಕ್ಷಿಸಬಹುದಾದ ಭರವಸೆಯ ಪ್ರತಿಭೆಯಾಗಿದ್ದಾರೆ. ಅವರ ಕಥೆಗಳು ಈಗಾಗಲೇ ನಾಡಿನ ವಿಮರ್ಶಕರ, ಓದುಗರ ಮೆಚ್ಚುಗೆ ಗಳಿಸಿವೆ. ಪ್ರಜಾವಾಣಿ, ವಿಜಯಕರ್ನಾಟಕ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ ಪತ್ರಿಕೆಗಳ ಸಾಪ್ತಾಹಿಕ ಪುರವಣಿಗಳಲ್ಲಿ ಇವರ ಕಥೆಗಳು ಬಹುಮಾನ ಪಡೆದದ್ದುದಲ್ಲದೆ ತೀರ್ಪುಗಾರರ, ಓದುಗರ, ಮನಗೆದ್ದಿರುವುದು ವಿಶೇಷ ಸಂಗತಿಯಾಗಿದೆ.

**ಅಡಿ ಟಿಪ್ಪಣಿಗಳು :**

೧. ಟಿ.ಪಿ. ಅಶೋಕರ 'ಗ್ರಾಮ ಸಮುದಾಯದ ಭೂತ, ವರ್ತಮಾನ, ಭವಿಷ್ಯ' ಲೇಖನ : ವಿಜಯಕರ್ನಾಟಕ ಪತ್ರಿಕೆ (ಸಾಪ್ತಾಹಿಕ ಪುರವಣಿ ದಿನಾಂಕ ೨೬-೪-೨೦೦೯)

೨. ಡಾ. ಕೇಶವ ಶರ್ಮಾರವರ 'ಮಾತು ಮಂಥನ' ಸಂದರ್ಶನ : ಮಯೂರ ಪತ್ರಿಕೆ (ಜುಲೈ ೨೦೦೮)

೩. 'ಮಣ್ಣಸೇರಿತು ಬೀಜದ ಮುನ್ನುಡಿ' ಮೊದಲ ಮುದ್ರಣ ಲೇಖಕನ ಕೆಲವು ಮಾತುಗಳು.

೪. 'ಕಥೆಗಾರನ ಹಾಡುಪಾಡು' ಸವಾರಿ ಸಂಕಲನ ಪುಟ ೮

೫. 'ಬರೆಯಲಾರೆ ಸುಖದ ಕಥೆ' ಸಂದರ್ಶನ : ಮಯೂರ ತಿಂಗಳ ಪತ್ರಿಕೆ ಜೂನ್ ೨೦೧೦

೬. ಡಾ. ಕೇಶವ ಶರ್ಮಾರವರ 'ಮಾತು ಮಂಥನ' ಸಂದರ್ಶನ : ಮಯೂರ ಪತ್ರಿಕೆ (ಜುಲೈ ೨೦೦೮)

## ಅಧ್ಯಾಯ – ೩

# ಅಮರೇಶ ನುಗಡೋಣಿ ಕಥೆಗಳ ವಸ್ತು ವಿಶ್ಲೇಷಣೆ

ಈ ಶತಮಾನದ ಕೊನೆಯ ದಶಕದಲ್ಲಿ ಬರೆಯುತ್ತಿರುವ ಅಮರೇಶ ನುಗಡೋಣಿಯವರು ಪ್ರಸ್ತುತ ಸಮಾಜದ ಸಾಮಾಜಿಕ ಚಲನೆಯ ಮುಖಾಮುಖಿಯನ್ನು, ಅನೇಕ ಶಕ್ತಿಗಳನ್ನು, ಅವುಗಳ ಸಂಘರ್ಷವನ್ನು ತಮ್ಮ ಕಥೆಗಳಲ್ಲಿ ಬಿತ್ತರಿಸಿದ್ದಾರೆ. ಯಾವುದೇ ಕಥೆಗಾರನಿಗೆ ಪಾತ್ರಗಳು, ಸನ್ನಿವೇಶಗಳು ಎಷ್ಟು ಮುಖ್ಯವೋ ಅಷ್ಟೇ ಕಥೆಗೆ ವಸ್ತುಗಳ ವಿಶ್ಲೇಷಣೆ ಮುಖ್ಯವೆನಿಸುತ್ತದೆ. ಆ ನಿಟ್ಟಿನಲ್ಲಿ ವಸ್ತು ವಿಶ್ಲೇಷಣೆಯನ್ನು ವಿಂಗಡಿಸುವಿಕೆಯಲ್ಲಿ ಹಿಂದುಳಿದವರ ಬದುಕು, ದುಃಖ, ದುರಂತ, ಶೋಷಣೆ, ಪ್ರತಿಭಟಗಳಿಗೆ ಕಥೆಗಳಲ್ಲಿ ಬಹುಮುಖ್ಯ ಪಾತ್ರವಿರುತ್ತದೆ. ಆ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಪ್ರತಿಭಟನೆ, ಜಾತಿ, ವರ್ಗ ಸಂಘರ್ಷ, ಧರ್ಮ, ಮನುಷ್ಯನ ಸಂಬಂಧಗಳು, ಸುಧಾರಣಾ ವಾದಿಗಳ ಪ್ರಭಾವಗಳನ್ನು ಸ್ಥೂಲವಾಗಿ ಪರಿಚಯಿಸಲಾಗಿದೆ.

**ಪ್ರತಿಭಟನೆ :**

ಪ್ರತಿಭಟನೆಯು ಕಥೆಯ ವಸ್ತು ಪಾತ್ರ ಮತ್ತು ಸನ್ನಿವೇಶಗಳ ಹಿನ್ನೆಲೆಯಲ್ಲಿ ಸಂದರ್ಭಾನುಸಾರ ರೂಪುಗೊಳ್ಳುತ್ತದೆ. ಕನ್ನಡ ಸಾಹಿತ್ಯದಲ್ಲೂ ನವೋದಯ, ಪ್ರಗತಿಶೀಲ, ನವ್ಯದ ಕಾಲಘಟ್ಟಗಳ ಸಾಹಿತ್ಯಕ್ಕಿಂತ ಭಿನ್ನವಾದ ರೀತಿಯಲ್ಲಿ ಪ್ರತಿಭಟನಾತ್ಮಕ ಅಂಶಗಳಿಂದ ದಲಿತ ಬಂಡಾಯ ಸಾಹಿತ್ಯ ರೂಪುಗೊಂಡಿತು. ಕರ್ನಾಟಕದಲ್ಲಿ ಎಪ್ಪತ್ತರ ದಶಕದಲ್ಲಿ ಬಂಡಾಯ ಸಾಹಿತ್ಯ ನೆಲೆಯೂರಿತು. ಅಂಬೇಡ್ಕರ್ ಪೆರಿಯಾರ್ ಮಹಾರಾಷ್ಟ್ರದ ದಲಿತ ಪ್ಯಾಂಥರ್ ಚಳುವಳಿ, ದಲಿತ ಸಂಘ ಸಂಸ್ಥೆ, ಲೋಹಿಯಾ, ಕಾರ್ಲ್‌ಮಾರ್ಕ್ಸ್ ಪ್ರೇರಣೆಯಿಂದ ಬಂಡಾಯ ಸಾಹಿತ್ಯ ರೂಪುಗೊಂಡಿತು.

ದಲಿತ ಸಾಹಿತ್ಯಕ್ಕೆ ಪ್ರತಿಭಟನೆಯೇ ಮೂಲ ಆಧಾರ. ಈ ಪ್ರತಿಭಟನೆಯನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಶೋಷಣೆ ಮಾಡುವ ಮತ್ತು ಶೋಷಣೆಗೆ ಒಳಗಾದ ವರ್ಗಗಳನ್ನು ಸೃಷ್ಟಿಸಿ, ತುಳಿತಕ್ಕೊಳಗಾದವರ, ದನಿಯಿಲ್ಲದವರ, ಸೋತವರ, ನೊಂದವರ ಬಗ್ಗೆ ಜೀವಪರ ಕಾಳಜಿಯಿಂದ ಚಿತ್ರಿಸುವುದು, ಜೊತೆಗೆ ಶೋಷಣೆ ಮಾಡುವ ವರ್ಗದ ಅಮಾನವೀಯತೆ ಕ್ರೌರ್ಯವನ್ನು ವಿರೋಧಿಸುವುದೇ ಆಗಿವೆ. ಇದಕ್ಕಾಗಿಯೇ ಸಾಹಿತ್ಯ ಬದ್ಧವಾಗಿದ್ದರೆ ಅದು ದಲಿತ ಬಂಡಾಯ ಸಾಹಿತ್ಯ ಎನಿಸುತ್ತದೆ. ವಿವಿಧ ಬಗೆಯಲ್ಲಿ ಸಿಟ್ಟು ಸೇಡಿನ ಮನೋಭಾವ ಬಿಟ್ಟು ತುಳಿತಕ್ಕೊಳಗಾದ ಜನರ ಬದುಕು, ಶೋಚನೀಯ ಸ್ಥಿತಿ, ಧಾರುಣ ಸನ್ನಿವೇಶಗಳನ್ನು ಒಳಗೊಂಡಿರುತ್ತದೆ.

ಅಮರೇಶ ನುಗಡೋಣಿಯವರ ಪ್ರತಿಭಟನೆಯ ಸಾಹಿತ್ಯವೂ ಒಂದು ಕಲಾತ್ಮಕ ಅಭಿವ್ಯಕ್ತಿಯಾಗುವುದು. ದುಃಖ, ದುಮ್ಮಾನ, ಸಂಕಟ, ಸಿಟ್ಟು, ಆಕ್ರೋಶ, ಪ್ರತಿರೋಧ, ಶಕ್ತಿಪ್ರದರ್ಶನ

ಮಾಡಿಕೊಳ್ಳದೇ ನಮ್ಮ 'ದಮನೀಯ ಸ್ಥಿತಿಗೆ ನೀವೇ ಕಾರಣ' ಎಂದು ತಮ್ಮ ಸ್ಥಿತಿಯನ್ನು ಮೇಲ್ವರ್ಗಕ್ಕೆ ಮನಮುಟ್ಟುವಂತಹ ರೀತಿಯಲ್ಲಿ ಹೇಳುವುದು. ಆಶಾವಾದಿ ಧೋರಣೆಯಿಂದ ಪ್ರತಿಭಟನೆಯ ಆಶಯವನ್ನಿಟ್ಟುಕೊಂಡು ಕಥೆಗಳನ್ನು ಬರೆದರು. ಇವರ ಎಲ್ಲಾ ಕಥೆಗಳಲ್ಲಿ ಬಂಡಾಯದ ಧೋರಣೆ ಕಂಡುಬರುತ್ತದೆ ಎಂದು ಹೇಳಲಾಗದು.

ನುಗಡೋಣಿಯವರ ಕಥೆಗಳಲ್ಲಿ ಪ್ರತಿಭಟನೆಯ ಮಗ್ಗುಲುಗಳನ್ನು ನಿರಾಯಾಸವಾಗಿ ಗುರುತಿಸಬಹುದು. ಅವರು ದಲಿತೇತರ ಲೇಖಕರಾದರೂ ದಲಿತ ಸಂವೇದನೆಗಳನ್ನು ವ್ಯಕ್ತಪಡಿಸುವ ರೀತಿ ಅನನ್ಯವಾದುದು. ದಲಿತ ಜನಾಂಗದ ನೋವು ಹತಾಶೆ, ಅವಮಾನಗಳನ್ನು ಸ್ವತಃ ಅನುಭವಿಸಿದವರಂತೆ ನಿರೂಪಿಸುತ್ತಾರೆ. ದಲಿತ ಜೀವಗಳಿಗೂ ಕನಸು ಆದರ್ಶ ಭವಿಷ್ಯದ ನಿರೀಕ್ಷೆ ಸಾಮಾರ್ಥ್ಯಗಳಿರುವುದನ್ನು ಪಾತ್ರಗಳಿಗೆ ಜೀವ ತುಂಬುವುದರ ಮೂಲಕ ವ್ಯಕ್ತಗೊಳಿಸುತ್ತಾರೆ. ಪ್ರತಿಭಟನೆಯ ಸ್ವರೂಪ ಕೆಲವು ಕಥೆಗಳಲ್ಲಿ ನೇರವಾಗಿ ಕಂಡು ಬಂದರೆ ಇನ್ನೂ ಕೆಲವು ಕಥೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿದಿದೆ.

ಪ್ರತಿಭಟನೆ ಎಂಬುದು ಕೇವಲ ಕೆಳ ಸಮುದಾಯದಿಂದ ಅಷ್ಟೇ ವ್ಯಕ್ತವಾಗದೇ ಮೇಲ್ವರ್ಗದಿಂದಲೂ ವ್ಯಕ್ತವಾಗುವ ರೀತಿ "ಹೊತ್ತು ಮಾಡುವ ಸಮಯ" ಕಥೆಯಲ್ಲಿ ಕಂಡು ಬರುತ್ತದೆ. ಗೌಡನ ಕ್ರೌರ್ಯ, ದಬ್ಬಾಳಿಕೆ, ಕಾಮುಕತೆ, ಸಣ್ಣತನವನ್ನು ಸ್ವತಃ ಆತನ ಹೆಂಡತಿಯೇ ಗುಪ್ತವಾಗಿ ಪ್ರತಿರೋಧಿಸುತ್ತಾಳೆ. 'ಆನೇ ನಡೆದದ್ದೆ ಹಾದಿ' ಎಂಬ ರೀತಿಯಲ್ಲಿ ಮೆರೆಯುವ ದೊಡ್ಡನ ಗೌಡನ ವಿಷಯ ಲಂಪಟತನದಿಂದ ಅದೆಷ್ಟೋ ಬಡಹೆಣ್ಣು ಮಕ್ಕಳು ಶೀಲ ಕಳೆದುಕೊಂಡಿವೆ. ಗೌಡನ ಹೆಂಡತಿ ಅಕ್ಕಮ್ಮನಿಗೆ ಆತನ ಸ್ಪರ್ಶ ಹಿತವೆನಿಸಲೇ ಇಲ್ಲ. ಅಕ್ಕಮ್ಮನಿಗೆ ಮದುವೆಯಾಗಿ ಅದೇ ಮೂರ್‍ನಾಲ್ಕು ವರ್ಷಗಳಾಗಿದ್ದವು. ಆ ಮೂರ್‍ನಾಲ್ಕು ವರ್ಷಗಳಲ್ಲಿ ಮನಸ್ಸಿಗೆ ವಿರುದ್ಧವಾಗಿ ಸಂಸಾರ ನಡೆಸುತ್ತಾ ಬೇಸತ್ತಿದ್ದಳು. ಲಿಂಗ ಕೈಯಿಗೆ ಬಂದು ಮನೆಯಲ್ಲೇ ದುಡಿಯುತ್ತಿದ್ದ. ದಲಿತ ಜಾತಿಯವನಾಗಿದ್ದ. ಲಿಂಗನ ಬಗ್ಗೆ ಅಕ್ಕಮ್ಮ ಪುಳಕಿತಳಾಗುತ್ತಾಳೆ. 'ಮೈಮನಸ್ಸಿನಿಂದ ಲಿಂಗ ಮೂಡಿಬಂದ'. ಮನಸ್ಸು ಕದಡತೊಡಗಿತು ಎಂದು ರೋಮಾಂಚಿತಳಾಗುವುದೇ ಒಂದು ಪ್ರತಿಭಟನೆ. ಲಿಂಗನನ್ನು ಸೇರಲು ಬಯಸುವ ಅಕ್ಕಮ್ಮನ ನಿರ್ಧಾರ ಬರಗೂರರ 'ಸೂರ್ಯ' ಕಾದಂಬರಿಯ ಸನ್ನಿವೇಶವನ್ನು ನೆನಪಿಗೆ ತರುತ್ತದೆ. ಗೌಡ, ಲಿಂಗನನ್ನು ಕೊಲ್ಲಿಸಿದಾಗ ಅಕ್ಕಮ್ಮ ತೋರುವ ಪ್ರತಿಕ್ರಿಯೆ ನಿರೀಕ್ಷಿತವಾದುದು. ಆಕೆ ಪ್ರತೀಕಾರಕ್ಕೆ ಮನೆಯ ಜೀತದಾಳು ಭೀಮನೊಡನೆ ಸೇರುವ ನಿರ್ಧಾರ ಮಾಡುತ್ತಾಳೆ. ಗೌಡ ಕೊಂದ ಲಿಂಗನ ಮಗನಿಂದಲೇ ಅಂತಿಮವಾಗಿ ಲೈಂಗಿಕ ಸಂಯೋಗ ಹೊಂದುತ್ತಲೇ ಸಂತಾನ ಪಡೆಯುವುದರ ಮೂಲಕ ಪ್ರತಿಭಟನೆಯ ಹೊಸದಾರಿ ತುಳಿಯುತ್ತಾಳೆ. ಗಂಡನ ನಿರ್ವೀಯತನದಿಂದ ಲಭಿಸಿದ ಬಂಜೆತನ ದಲಿತನ ದೈಹಿಕ ಸಂಬಂಧದಿಂದಲೇ ಫಲವತ್ತಾಗುತ್ತದೆ.

ಪ್ರತಿಯೊಂದು ಕಥೆಯೂ ಪ್ರತಿಭಟನೆಯ ಆಶಯದೊಡನೆ ಮುಗಿಯಬೇಕು ಎಂಬ ನಿಯಮವೇನೂ ಇಲ್ಲ. ಯಾವುದೇ ಧೋರಣೆ ನೇರವಾಗಿ ಪ್ರಕಟವಾಗದಿದ್ದರೂ ನಿರೂಪಣಾ ವಿಧಾನದಿಂದಲೇ ಲೇಖಕ ಏನನ್ನು ಹೇಳಲು ಹೊರಟಿದ್ದಾನೆ? ಆತನ ನಿಲವು ಏನೆಂಬುದು ಸ್ಪಷ್ಟವಾಗುವುದು. ಕೃತಿಯಲ್ಲಿ ವ್ಯಂಗ್ಯಕ್ಕೆ ಮಹತ್ವ ಬರಬಹುದು. ಆಕ್ರೋಶವೇ ಪ್ರಮುಖ ಗುರಿಯಾಗಬಹುದು. ಅಸಹಾಯಕತೆ, ವಿಡಂಬನೆ, ದುಃಖ ವಿಷಣ್ಣತೆ ಹೀಗೆ ಹತ್ತಾರು ಬಗೆಯಲ್ಲಿ ಗೋಚರವಾಗುತ್ತದೆ. ಈ ವಿವಿಧ ಅಭಿವ್ಯಕ್ತಿ ವಿನ್ಯಾಸಗಳ ಹಿಂದೆ ಕ್ರೂರ ವ್ಯವಸ್ಥೆಯ ಸೂಕ್ಷ್ಮ ಅರಿವು ಪ್ರಮುಖ ಪಾತ್ರವಹಿಸುತ್ತದೆ. ಇದು ಸಮಾಜದಲ್ಲಿ ಸಮಾನತೆ ತರುವ ದಲಿತರನ್ನು ಮನುಷ್ಯರಂತೆ ಕಾಣುವ ಜೀವಪರದಂತೆ ಕಾಣುವುದು, ಅವರ ಮೇಲೆ ಅನುಕಂಪ ತೋರಿಸುವುದು ಒಂದು ಭಾಗವಾದರೆ ಅವರನ್ನೂ ಸಹ ಬಹುಮುಖ್ಯವಾಗಿ ಬದುಕಲು ಮೇಲ್ವರ್ಗದವರು ಅವಕಾಶಕೊಡಬೇಕೆಂದು ಅರಿವು ಮೂಡಿಸುವುದು.

'ಪ್ರತಿಭಟನೆ'ಯೆಂದರೆ ಆರ್ಭಟ, ನಿಂದನೆ, ಕ್ರಾಂತಿಗಳಷ್ಟೇ ಅಲ್ಲ. ಯಾವುದನ್ನು ಯಜಮಾನ ಸಂಸ್ಕೃತಿ ಮಾನ್ಯ ಮಾಡುವುದಿಲ್ಲವೋ ಅಂದರೆ ದಲಿತ ಬದುಕಿನ ಜೀವವಂತಿಕೆಯನ್ನು ವಿಶಿಷ್ಟತೆಯನ್ನು ಅದರ ಅಂತರಂಗದಲ್ಲಿರುವ ಗಾಢತೆಯನ್ನು ಮೂರ್ತವಾಗಿ ಹಿಡಿದಿಟ್ಟು ದಾಖಲೆ ಮಾಡುವುದೇ ಅತ್ಯಂತ ಆಳವಾದ ಪ್ರತಿಭಟನೆಯಾಗುವುದು.

ಈ ಅರ್ಥದಲ್ಲಿ ರಕ್ತ ರಹಿತ – ರಕ್ತ ಸಹಿತ ಎರಡು ಬಗೆಯ ಪ್ರತಿಭಟನೆಗಳನ್ನು ಶೋಷಣೆಯ ಪ್ರಮಾಣಕ್ಕನುಗುಣವಾಗಿ ನುಗಡೋಣಿಯವರು ಅರ್ಥಪೂರ್ಣವಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಕೆಲವೆಡೆ ವರ್ಗ, ವರ್ಣ, ಶೋಷಣೆಯ ವಿರುದ್ಧ ನೇರವಾದ ಗಟ್ಟಿ ಧನಿಯಿದ್ದರೆ ಮತ್ತೊಂದೆಡೆ ತಣ್ಣನೆಯ ಬಂಡಾಯದ ಆಶಯವಿದೆ. ಪ್ರತಿಭಟನೆಯನ್ನು ಕಲಾಪೂರ್ಣವಾಗಿ ವಾಸ್ತವತೆಯ ನೆಲೆಯಲ್ಲಿ ವಿವರಿಸಿದ್ದಾರೆ. ಲೇಖಕರ ಮನೋಧರ್ಮ ಪ್ರತಿಭಟನೆಯನ್ನೇ, ಸಮಾಜ ಪರಿವರ್ತನೆಯ ಕನಸನ್ನೇ ನೆಚ್ಚಿಕೊಂಡಿದೆ. ಪ್ರತಿಭಟನೆಯ ಮೂಲಕ ಅಮಾನವೀಯತೆ ಕ್ರೌರ್ಯವನ್ನು ಸೋಲಿಸಿ ಮಾನವೀಯತೆಯನ್ನು ನೆಲೆಗೊಳಿಸುವುದು ಲೇಖಕರ ಉದ್ದೇಶವಾಗಿದೆ.

'ಮಣ್ಣು ಸೇರಿತು ಬೀಜ' ಕಥೆಯಲ್ಲಿ 'ನಾಗಮ್ಮ' ಸತ್ತಾಗ ಅಂತ್ಯ ಸಂಸ್ಕಾರಕ್ಕೆ ಸ್ವಲ್ಪವೂ ಹಣವಿಲ್ಲದಂತಹ ದುಸ್ಥಿತಿಯಲ್ಲಿ ಜಂಬಣ್ಣ ಸಾಲಸೋಲ ಮಾಡಿ ಅಂತ್ಯ ಸಂಸ್ಕಾರ ಮುಗಿಸಿದ. ಗ್ರಾಮದ ಮುಖಂಡರು ಪೋಲಿಸ್ ವ್ಯವಸ್ಥೆಯ ದುರಾಸೆಯಿಂದ ಅಮಾನವೀಯವಾಗಿ ವರ್ತಿಸಿದ್ದು, ಜಂಬಣ್ಣನ ಮೇಲೆ 'ನಾಗಮ್ಮನಿಗೆ ವಿಷ ಹಾಕಿ ಕೊಲ್ಲಿದನೆಂಬ' ಗಂಭೀರ ಆರೋಪ ಹೊರಿಸುವ ಸನ್ನಿವೇಶ ಆಕೆಯ ಆಸ್ತಿಯನ್ನು ಕಬಳಿಸಲು ಸಂಚು ರೂಪಿಸುವ ಹೀನ ಮನಸ್ಥಿತಿ ಮೂಕ ಮಗನ ಪರಿಸ್ಥಿತಿಯ ಲಾಭಪಡೆಯುವ ಹವಣಿಕೆಯನ್ನು

ಅನಾವರಣಗೊಳಿಸುತ್ತದೆ. ಇನ್ನೇನು ನ್ಯಾಯಕ್ಕೆ ಪರಾಜಯವಾಯಿತು ಎಂಬಂತಹ ಸ್ಥಿತಿಯಲ್ಲಿ ಜಂಬಣ್ಣ *"ನೀವೇ ಊರು ಬಿಟ್ಟು ಹೊಂಟ್ರ ಚಲೋ ಆಯ್ತು, ನಡೀರಿ'* 'ಎಂದವನೇ *ಗಯ್ಯಪ್ಪನನ್ನು ನೂಕಿ ಒಳಗೆ ಓಡಿದ, ಆ ಕ್ಷಣವೇ ಗಯ್ಯಪ್ಪ ನಮ್ಮನ್ನ ಊರಾಗ ಇರಗೊಡವಲ್ರಪ್ಪೋ"*ಎಂದು ಅರಚಿದ. ಅದುವರೆಗೂ ಏಳೆಂಟು ವರ್ಷಗಳಾದರೂ ತುಟಿಪಿಟಿಕ್ಕೆನ್ನದೆ ಸುಮ್ಮನಿದ್ದ ಗಯ್ಯ ಮಾತಾಡಿದ್ದೆ ಒಂದು ಬಂಡಾಯವೇ ಸರಿ ಎನ್ನಬಹುದು.

ಅದುವರೆಗೆ ಅನುಭವಿಸಿದ ಶೋಷಣೆಗೆ ಪೂರ್ಣ ವಿರಾಮ ಹಾಕುವ ಅನಿವಾರ್ಯತೆ ಬಂದಿತ್ತು. ಆ ಪ್ರತಿಭಟನೆಯ ಧ್ವನಿಯೇ ಹೊಸ ಭರವಸೆಯ ಬದುಕಿಗೆ ಸ್ಫೂರ್ತಿಯಾಯಿತು. "ಗಯ್ಯ ಅಲೇ ತಿಕ್ಕವನೇ ನೀ ನೆಟ್ಟಗಿದ್ರೆ ನಾನು ಯಾಕ ಅಂಜ ರಾತ್ರೋ ರಾತ್ರಿ ಓಡಿ ಬರ್ತಿದ್ದೆ? ನಡಿ ಮನಿಗೆ ಹೋಗಾಮ ಇದೇ ಊರಾಗ ಬಾಳಿವಿ ಮಾಡಿ ಅದೇ ಕೌದ್ಯಾಗ ನಮ್ಮ ಹೆಣ ಹೊಲ್ದಾಗ ಮಣ್ಣಾಗಂಗ ಬದುಕಮು" ಎಂದು ಜಂಬಣ್ಣ ಸವಾಲು ಎದುರಿಸಲು ಸಿದ್ದನಾಗುತ್ತಾರೆ.

ಪ್ರತಿಭಟನೆಯ ಫಲಶೃತಿಯೇ ಆಶಾವಾದ ಎಂಬಂತೆ ಕಥೆಯ ಕೊನೆಯಲ್ಲಿ 'ಮೂಡಲು ಒಡೆದು ಹುಟ್ಟುವಸೂರ್ಯನಿಗಾಗಿ ಕಾಯ ತೊಡಗಿದರು' ಎಂಬ ಮಾತು ಅರ್ಥಪೂರ್ಣವಾದುದು.

**'ಸವಾರಿ ಕಥೆ'**ಯಲ್ಲಿ ವಜ್ರಪ್ಪನ ವ್ಯಕ್ತಿತ್ವವೇ ಇಡೀ ವ್ಯವಸ್ಥೆಯ ಹುಳುಕನ್ನು ಕ್ರೌರ್ಯವನ್ನು ಎದುರಿಸಿ ತಾನು ಕಂಡುಕೊಂಡ ಸತ್ಯವನ್ನು ನಿರ್ಭಯವಾಗಿ ಹೇಳುವುದು ವಜ್ರಪ್ಪ ತನ್ನ ಗುರು ಸುಡುಗಾಡು ಸಿದ್ದನನ್ನು ಸಹ ಮೀರಿ ನಿಲ್ಲುತ್ತಾನೆ. ಕೊನೆಯಲ್ಲಿ ಪ್ರಾಣ ಕಳೆದುಕೊಂಡರೂ ಸತ್ತ ಮೇಲೆ ಸತ್ಯವು ಜಗಜ್ಜಾಹೀರಾಗುವುದು ಪ್ರತಿಭಟನೆಯ ವಿಭಿನ್ನ ಆಯಾಮದಂತೆ ಕಂಡುಬರುತ್ತದೆ. ಕಥೆಯಲ್ಲಿ ಪಾತ್ರಗಳು ಕೊನೆಯಲ್ಲಿ ಸಾಯುವುದೇ ಒಂದು ರೀತಿಯ ಸತ್ವಯುತ ಪ್ರತಿಭಟನೆಯಾಗಿದೆ.

**'ತಮಂದದ ಕೇಡು'** ಕಥೆಯು ತಣ್ಣನೆಯ ಬಂಡಾಯವನ್ನು ಹೇಳುತ್ತದೆ. ಎಲ್ಲೂ ಅತಿಯಾದ ಭಾವಾವೇಶದ ರೋಷಭರಿತವಾದ ಧ್ವನಿ ಕಂಡು ಬರುವುದಿಲ್ಲ. ಉದ್ವಿಗ್ನತೆಯೇ ಇಲ್ಲದೇ ಸಾಗುವ ಕಥೆಯಲ್ಲಿ ಶೋಷಣೆಯ ಅತಿರೇಕ ಕಂಡುಬರುತ್ತದೆ. ಶಾಂತಗೌಡನು ದಲಿತನಾದ ದುರುಗನನ್ನು ವಿವಿಧ ರೀತಿಯಲ್ಲಿ ಶೋಷಿಸಿದ ಆತನು ಪ್ರೀತಿಯಿಂದ ಬೆಳೆಸಿದ ಮರಗಳನ್ನೇ ಕಡಿಸಿದ. ದುರುಗನ ಹೆಂಡತಿ ಚಂದವ್ವಳನ್ನು ತನ್ನ ಕಾಮ ತೃಷೆಗಾಗಿ ಬಳಸಿಕೊಂಡ. ಆದರೂ ದುರುಗ ಮೌನವಾಗಿಯೇ ಸಹಿಸಿಕೊಂಡಿದ್ದ/ ಆದರೆ ಯಾವಾಗ ತನ್ನ ಮಗನ ಪ್ರಾಣಕ್ಕೆ ಕುತ್ತು ಬಂತೋ ಆಗ ಗೌಡನನ್ನೇ ನೀರಲ್ಲಿ ಮುಳುಗಿಸಿ ತಾನೂ ಸಾಯುವುದಕ್ಕೆ ಸಿದ್ದನಾದ ಇದು ಪ್ರತಿಭಟನೆಯ ಸ್ಫೋಟವನ್ನು ಸೂಚಿಸುತ್ತದೆ. ಬಡವರ, ದಲಿತರ ಸಹನೆಗೂ ಒಂದು ಮಿತಿಯಿದೆ ಎಂಬುದನ್ನು ಸೂಚಿಸುತ್ತದೆ.

'ಪಕ್ವಕ್ಕಲದೆ ಪರಿಣಾಮ ಕಾಣಿಸದು' ಕಥೆಯಲ್ಲಿ ಭೂಮಾಲೀಕತ್ವದ ವಿರುದ್ಧದ ಸಶಸ್ತ್ರ ಬಂಡಾಯ ಎದ್ದು ಕಾಣುತ್ತದೆ. ಶೋಷಣೆ ಮಿತಿ ಮೀರಿದರೆ ಬಡವರ ಕೈಗೆ ಬಂದೂಕು ಬರುತ್ತದೆ. ಎಂಬುದು ಇಲ್ಲಿ ವ್ಯಕ್ತವಾಗಿದೆ. ಇದು ನಕ್ಸಲ್ ಚಳುವಳಿಯನ್ನು ಹೋಲುತ್ತದೆ. ಹಳ್ಳಿಗಳಲ್ಲಿ ಬರಗಾಲದ ಸಂಕಟ ತಾಳಲಾರದೇ ರೈತರು ದೂರ ದೂರಿನ ಪಟ್ಟಣಗಳಿಗೆ ವಲಸೆ ಹೊರಟದ್ದನ್ನು ಕಂಡು ಗೌಡರು ಸಮಯ ಸಾಧಿಸಿ ಅವರ ಹೊಲಗಳನ್ನು ಕಡಿಮೆ ಬೆಲೆಗೆ ಕೊಂಡುಕೊಂಡು ಜನರನ್ನು ಭೂರಹಿತರನ್ನಾಗಿ ಮಾಡಿದ್ದರು. ಆದರೆ ಚಂದ್ರಪ್ಪ ಮತ್ತವರ ಗುಂಪಿನವರು ಜಮೀನ್ದಾರರ ಅಟ್ಟಹಾಸಕ್ಕೆ ಅಂತ್ಯ ಕಾಣಸಲು ಬಂದೂಕನ್ನೇ ಕೈಗೆತ್ತಿಕೊಂಡು ನರಸನಗೌಡ ಯಂಕಪ್ಪರನ್ನು ಹತ್ಯೆ ಮಾಡಿ, ತಲ್ಲಣಗೊಳ್ಳುವಂತೆ ಮಾಡಿದ್ದರು.

"ಗೌಡ್ರೇ, ನೀವು ಬಾರೀ ಜಮೀನ್ದಾರರು ನಿಮ್ಮ ಜಮೀನಿನಲ್ಲಿ ೨೫ ಭಾಗ (ಕಾಲು ಭಾಗ) ನಿಮ್ಮೂರಿನ ಬಡವರಿಗೆ ಹಂಚಿದರೆ ಭೂರಹಿತರೂ ಅಸ್ತಿತ್ವಪಡಿತಾರೆ ಹಿಟ್‌ಲೀಸ್ಟನಲ್ಲಿ ನೀವೂ ಇದ್ದೀರಿ"[13] ಅಂತ ಬೆದರಿಕೆ ಹಾಕಿದ್ದು ಇಡೀ ಶೋಷಕ ಸಮುದಾಯವನ್ನೇ ಬೆಚ್ಚಿ ಬೀಳಿಸುತ್ತದೆ. ಅಹಿಂಸೆಯಿಂದ ಕ್ರಾಂತಿ ವಿಫಲತೆ ಕಂಡು ಬಂದರೆ ಸಾಮಾಜಿಕ ಆರ್ಥಿಕ ಅಸಮಾನತೆಗೆ ಕಾರಣರಾದವರ ಸರ್ವನಾಶಕ್ಕೆ ಸಮ ಸಮಾಜದ ನಿರ್ಮಾಣಕ್ಕೆ ರಕ್ತಪಾತವೇ ಉತ್ತರವೆಂಬುದು ಇದರ ತಾತ್ವಿಕತೆಯಾಗಿದೆ ಕೊನೆಗೆ ಗೌಡನೆ ಭೂಮಿ ಹಂಚಲು ಮುಂದಾಗುವುದು ವ್ಯವಸ್ಥೆಯ ಸೋಲನ್ನು ಸೂಚಿಸುತ್ತದೆ.

**ಆ) ಜಾತಿ, ವರ್ಗ, ಸಂಘರ್ಷ :**

ನಮ್ಮ ದೇಶ ಬಡತನದಿಂದ ಕೂಡಿದ ಶ್ರೀಮಂತ ದೇಶವಾಗಿದೆ. ನಾವು ಸಾವಿರಾರು ವರ್ಷಗಳಿಂದ ಭವ್ಯಪರಂಪರೆ, ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿದ್ದರೂ ಸಹ ಸಮಾಜದ ಎಲ್ಲಾ ವರ್ಗಗಳಿಗೂ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರಲ್ಲಿ ವಿಫಲರಾಗಿದ್ದೇವೆ. ಉಳ್ಳವರು ಮತ್ತು ಇಲ್ಲದವರ ನಡುವಿನ ಅಂತರ ದಿನೇ ದಿನೇ ಹೆಚ್ಚುತ್ತಿದೆ. ಈ ದೇಶದಲ್ಲಿ ಕೋಟಿ ಕೋಟಿ ಗಳಿಸಿರುವ ಶ್ರೀಮಂತರ ವೈಭವದ ಚಿತ್ರಣ ಒಂದೆಡೆಯಾದರೆ ಹೊಟ್ಟೆಗೆ ಎರಡು ಹೊತ್ತು ತಿನ್ನಲು ಕೂಳಿಲ್ಲದೇ ಮೈ ಮುಚ್ಚುವಷ್ಟು ತುಂಡು ಬಟ್ಟೆ ಸಹ ಇಲ್ಲದೆ ಪರದಾಡುವಂತಹ ಬಡವರ ಧಾರುಣ, ಹೀನಾಯ ಕಥೆ ಮತ್ತೊಂದೆಡೆ. ಸಾಂಸ್ಕೃತಿಕವಾಗಿ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದರೂ ಸಹ ಸಾಮಾಜಿಕವಾಗಿ ಏಕತೆಯನ್ನು ಸಾಧಿಸಲಾಗಲಿಲ್ಲ.

ಭೂಮಿ ಇಲ್ಲದವರು, ನಿರ್ಗತಿಕರು ಭಾರತ ಭೂಮಿಯನ್ನು ಜನನಿ ಜನ್ಮಭೂಮಿ ಎಂದು ಆರಾಧಿಸುವುದಾದರೂ ಹೇಗೆ? ತುಂಡು ಭೂಮಿಗಾಗಿ ಜೀವನದುದ್ದಕ್ಕೂ ಹೋರಾಡಿ ಕೊನೆಗೆ ಹತಾಶೆಯಿಂದ ಸತ್ತುಹೋದ ಕಾರಂತರ 'ಚೋಮ'ನಂತಹವರು ನಮ್ಮ ದೇಶದಲ್ಲಿ ಲಕ್ಷಾಂತರ ಜನರಿದ್ದಾರೆ.

'ವರ್ಗ' ಎಂಬುದು ಉಳ್ಳವರು ಮತ್ತು ಇಲ್ಲದವರನ್ನು ಸೂಚಿಸಿದರೆ, 'ಜಾತಿ' ಎಂಬುದು ಮೈಮುಟ್ಟಿಸಿಕೊಳ್ಳುವ, ಮುಟ್ಟಿಸಿಕೊಳ್ಳಲಾರದಂತಹ ಮಡಿಮೈಲಿಗೆ ಕಲ್ಪನೆಯನ್ನೊಳಗೊಂಡಿರುತ್ತದೆ. ಸಾಹಿತ್ಯದಲ್ಲಿ ವರ್ಗ ಮತ್ತು ಜಾತಿ, ಸಂಘರ್ಷವು ಸೃಜನಶೀಲ ಸಾಮಾಜಿಕತೆಯ ನೈಜ ಚಿತ್ರಣವನ್ನು ನೀಡುತ್ತದೆ.

ಅಜ್ಞಾನ, ಮುಗ್ಧತೆ, ಅನಕ್ಷರತೆಯೇ ಮನೆಮಾಡಿಕೊಂಡಿರುವ ಸಮಾಜದಿಂದ ತಿರಸ್ಕರಿಸಲ್ಪಟ್ಟ ಸಮುದಾಯಗಳು ಮಾತಾಡುವುದೇ ಒಂದು ಸಾಮಾಜಿಕ ಕ್ರಾಂತಿಗೆ ನಾಂದಿ ಹಾಡಿದಂತಿದೆ. ಕೆಳಸಮುದಾಯದ ದಲಿತನೊಬ್ಬ ಗುಡುಗಿದರೆ ಪಟ್ಟಭದ್ರ ಹಿತಾಸಕ್ತಿಗಳು ಪರಂಪರಾಗತ ಮೌಲ್ಯಗಳೂ ನಡುಗುತ್ತವೆ. ಹಣಬಲ ಮತ್ತು ಶ್ರೇಷ್ಠತೆಯ ಕುಲದಲ್ಲಿ ಮೇಲು, ಮೇಲ್ವರ್ಗ ಎಂಬ ಪ್ರಸ್ತುತ ಸಮಾಜದಲ್ಲಿ ಶ್ರೀಮಂತಿಕೆಯೇ ಮಾನದಂಡವಾಗಿದೆ. ಮೇಲುವರ್ಗ ಉಚ್ಚಜಾತಿಯ ನಂಬಿಕೆ ಆಚರಣೆ, ಸಂಪ್ರದಾಯಗಳನ್ನು ಪ್ರಧಾನ ಸಂಸ್ಕೃತಿಯೆಂದು ಪರಿಗಣಿಸಲಾಗಿದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ತುಳಿತಕ್ಕೊಳಪಟ್ಟ ಕೆಳಜಾತಿಯ ಸಂಸ್ಕೃತಿಯನ್ನು ಅಧೀನ ಸಂಸ್ಕೃತಿಯೆಂದು ಪರಿಗಣಿಸಲಾಗಿದೆ.

ಈ ಎರಡು ಸಂಸ್ಕೃತಿಗಳ ಪರಸ್ಪರ ಮುಖಾಮುಖಿ ಘರ್ಷಣೆಯ ಫಲಶೃತಿಯೇ ಬಂಡಾಯ ಸಾಹಿತ್ಯದ ಮೌಲ್ಯಗಳಾಗಿ ರೂಪಗೊಂಡವು. ಪ್ರತಿ ಸಂಸ್ಕೃತಿ ಜನ್ಮ ತಳೆಯಲು ಕಾರಣವಾಯಿತು. ದೇವರ, ಧರ್ಮಗಳ ಹೆಸರಿನಲ್ಲಿ ಒಂದು ವರ್ಗವನ್ನು ಶತ-ಶತಮಾನಗಳಿಂದ ನಿರಂತರವಾಗಿ ಶೋಷಿಸುತ್ತಲೇ ಬಂದಿದೆ. ಒಂದು ನಿರ್ದಿಷ್ಟ ಕಾಲಘಟ್ಟ ಹಂತದವರೆಗೂ ಕೆಳವರ್ಗದವರು ಅದನ್ನು ಮೌನವಾಗಿಯೇ ಸಹಿಸಿಕೊಂಡು ಬಂದರು ಯಾವಾಗ ವಾಸ್ತವತೆಯ ಅರಿವಾಯಿತೋ ವ್ಯವಸ್ಥಿತವಾಗಿ ತನ್ನನ್ನು ಹತ್ತಿಕ್ಕುವ, ಶೋಷಿಸುವ ಪ್ರಯತ್ನಗಳು ನಡೆಯುತ್ತವೆ ಎಂದು ತಿಳಿಯುತ್ತಲೇ ಜಾಗೃತಿ ಮೂಡಿತು.

ಮನುಷ್ಯ ಏನನ್ನು ಬೇಕಾದರೂ ಸಹಿಸಬಲ್ಲ ಆದರೆ ಸ್ವಾಭಿಮಾನಕ್ಕೆ ಪೆಟ್ಟು ಬಿದ್ದರೇ ಪ್ರತಿರೋಧ ತೋರಲೇಬೇಕಾಗುತ್ತದೆ. ತನ್ನನ್ನು ಹಾಗೂ ತನ್ನ ಸಮುದಾಯ ಬಾಂಧವರಿಗೆ ಬೇರೆಯವರು ಭೌತಿಕವಾಗಿ ಮಾನಸಿಕವಾಗಿ ತೊಂದರೆಗೀಡು ಮಾಡಿದರೆ ಸುಮ್ಮನಿರಲಾರದೇ ಎದುರಿಸಲು ಮುನ್ನುಗ್ಗುತ್ತಾನೆ. ಅದುವರೆಗೂ ಮೌನವಾಗಿದ್ದ ಅವನನೊಳಗಿನ ಬಂಡಾಯದ ಧ್ವನಿ ಶೋಷಣೆ ಮಾಡುವವರ ವಿರುದ್ಧ ಮೊಳಗುತ್ತದೆ. ಕನ್ನಡ ಸಾಹಿತ್ಯದಲ್ಲಿ ಮೊದಲ ಸಲ ೧೨ನೆಯ ಶತಮಾನದಲ್ಲಿ ವಚನ ಚಳುವಳಿಯಿಂದ ಬೆಳೆದು ಬಂತು. ದೇವರು, ಧರ್ಮ, ವೈದಿಕಶಾಹಿ, ಆರ್ಥಿಕ ಅಸಮಾನತೆ, ಜಾತೀಯತೆ, ಲಿಂಗ ತಾರತಮ್ಯದ ವಿರುದ್ಧ ಮೊದಲ ಸಲ ಪ್ರತಿಭಟನೆ ವ್ಯಕ್ತವಾಯಿತು.

ನವೋದಯದ ಲೇಖಕರು ವಿಶಾಲವಾದ ಅರ್ಥದಲ್ಲಿ ಸಮಾಜವನ್ನು ನೋಡಿದವರು ಬರೀ ಭಾವಾನಾತ್ಮಕತೆ, ಕಲ್ಪನಾತ್ಮಕತೆ, ಆದರ್ಶಮಯತೆ ಕನಸುಗಾರಿಕೆಯಿಂದ ಕೂಡಿದ ಸಾಹಿತ್ಯದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಮಾತ್ರ ಪ್ರತಿಭಟನೆ ಕಂಡುಬಂತು. ಅವರ ಪ್ರತಿಭಟನೆ ಏನಿದ್ದರೂ ಬ್ರಿಟಿಷರ ವಿರುದ್ಧವಷ್ಟೇ ಇತ್ತು. ನಂತರ ಪ್ರಗತಿಶೀಲ ಕಾಲದಲ್ಲಿ ಪ್ರತಿಭಟನೆಯು ಆಕ್ರೋಶದ ರೂಪತಾಳಿತು. ಪ್ರತಿಭಟನೆಯ ಕಥಾವಸ್ತು ಶೈಲಿ ಭಾಷೆ ಮತ್ತು ಆದರ್ಶಗಳ ಪರಿವರ್ತನೆಯಿಂದ ತಲೆದೋರಿದೆ ಅನೇಕ ತಲೆಮಾರುಗಳಿಂದ ತೀರಾ ಕೆಟ್ಟದ್ದಾಗಿ ನರಕ ಸದೃಶ್ಯವಾದ ದಮನೀಯ, ಶೋಚನೀಯವಾದ ಸ್ಥಿತಿಯ ಬಾಳಿನ ಕಹಿಯನ್ನು ಉಂಡ ಜನರಲ್ಲಿ ಪ್ರತಿಭಟನೆ ಪ್ರಖರವಾಗಿ ಮೂಡಿಬಂದಿದೆ.

ಭಾರತೀಯ ಪರಂಪರೆ ಕೆಳವರ್ಗದ ಸಾಮಾಜಿಕ ಸಾಂಸ್ಕೃತಿಕ ಹೋರಾಟವನ್ನು ತಿರಸ್ಕಾರದಿಂದ ಕಾಣುತ್ತಾ ಬಂದಿದೆ. ಪುಟಿದೇಳುವ ಅದರ ಜೀವಸೆಲೆಯನ್ನು ಅದುಮುತ್ತಲೇ ತನ್ನ ಬಾಹುಗಳನ್ನು ವಿಸ್ತರಿಸಿಕೊಳ್ಳುತ್ತಿದೆಯಾದರೂ ಅವರೆಲ್ಲ ಶೋಷಣೆಯಿಂದ ಮುಕ್ತರಾಗಿದ್ದಾರೆ ಅಥವಾ ಅದರ ಪೋಷಕರಾಗುತ್ತಿದ್ದಾರೆ. ಎಂಬ ಸರಳೀಕೃತ ತೀರ್ಮಾನ ಕೈಗೊಳ್ಳುತ್ತಿರುವ ಸ್ಥಿತ್ಯಂತರದ ಸಂದರ್ಭದಲ್ಲಿ ಅಪಾಯಕಾರಿ. ಆದರೆ ನಮ್ಮ ಬದುಕಿಗೆ ಅರ್ಥಕೊಡಬಲ್ಲ ಜೀವಂತ ಮಾದರಿಗಳು ಅಪಾರವಾಗಿವೆ. ಸಾಹಿತ್ಯದ ಮೂಲಕ ನೊಂದವರ ಬದುಕಿನ ಬವಣೆಗಳನ್ನು ಕಟ್ಟಿಕೊಡುವ ಕವಿಗಳು ಲೇಖಕರು ಇಂತಹ ದುಃಸ್ಥಿತಿಯನ್ನು ವಿರೋಧಿಸಿ ಸಂಪ್ರದಾಯಗಳನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾರೆ. 'ಇಕ್ರಲಾ ಒದಿರ್ಲಾ ಈ ನನ್ನ ಮಕ್ಕಳ ಚರ್ಮ ಎಬ್ರಲಾ' ಅಂತ ವ್ಯವಸ್ಥೆಯ ವಿರುದ್ಧ ಆಕ್ರೋಶದ ಧ್ವನಿ ವ್ಯಕ್ತಪಡಿಸುತ್ತಾರೆ.

ಸಂವೇದನಾಶೀಲನಾದ ಸೃಜನಶೀಲ ಲೇಖಕನಾದವನು ಮೇಲುವರ್ಗದ ಕ್ರೌರ್ಯ ಜೀತಗಾರಿಕೆ, ಬಡತನ, ಹತಾಶೆ, ನಿರಾಸೆಗಳಿಗೆ ಮೂಲ ಕಾರಣಗಳನ್ನು ಹುಡುಕುತ್ತಾ ಹೋಗುತ್ತಾನೆ. ಪ್ರಸ್ತುತ ವ್ಯವಸ್ಥೆಯಲ್ಲಿ ತಾಂಡವವಾಡುತ್ತಿರುವ ವಂಚನೆ, ದ್ರೋಹ ನಂಬಿಕೆದ್ರೋಹ, ಅಮಾನುಷ ಅಂಶಗಳನ್ನು ಗುರುತಿಸಿ ಸಾಮಾಜಿಕ ದುರ್ವ್ಯವಸ್ಥೆಯನ್ನು ದಿಟ್ಟತನದಿಂದಲೇ ಪ್ರಶ್ನಿಸುತ್ತಾನೆ. ಅದೊಂದು ಸ್ಫೋಟದ ರೀತಿಯಲ್ಲಿ ದಾಖಲಾಗುತ್ತದೆ. ಅಂತರಂಗದಲ್ಲಿ ಹೊಸ ಸಮಾಜದ ನಿರ್ಮಾಣದ ಕಳಕಳಿ ಪ್ರಸ್ತುತ ಸಮಾಜವನ್ನು ಕುರಿತು ಉಗ್ರವಾದ ಖಂಡನೆ ಇರುತ್ತದೆ.

ಹೀಗಾಗಿಯೇ ಅಸಮಾನತೆ ಅನ್ಯಾಯ ದೌರ್ಜನ್ಯಗಳನ್ನೇ ಬಂಡವಾಳವಾಗಿ ಮಾಡಿಕೊಂಡು ತಲತಲಾಂತರದಿಂದ ಆರ್ಥಿಕ ದುರ್ಬಲರನ್ನು ಹಾಗೂ ಕೆಳಜಾತಿಯವರೆಂಬ ಒಂದೇ ಒಂದು ಕಾರಣಕ್ಕೆ ಅವ್ಯಾಹತ ಶೋಷಣೆ ನಡೆಸುತ್ತಾ ಬಂದ ಯಜಮಾನ ಸಂಸ್ಕೃತಿಯಲ್ಲಿದೆ. ಶೋಷಿತರಿಗೆ ನೆಮ್ಮದಿಯನ್ನು ತಂದು ಕೊಡುವುದು ಸಾಮಾಜಿಕ ನ್ಯಾಯ ಒದಗಿಸುವುದು. ಅಜ್ಞಾನ, ಅನಕ್ಷರತೆ ನಿವಾರಿಸುವುದು ಸುಧಾರಿತ ಜೀವನಕ್ರಮವನ್ನು ರೂಪಿಸುವುದು.

ಕನ್ನಡ ಕಥಾ ಸಾಹಿತ್ಯದಲ್ಲಿ ವರ್ಗ ಜಾತಿ, ಸಂಘರ್ಷವನ್ನು ಕುರಿತು ಅನೇಕ ಲೇಖಕರು ಪ್ರಸ್ತಾಪಿಸಿದ್ದಾರೆ. ದೇವನೂರು ಮಹದೇವ, ಬರಗೂರು ರಾಮಚಂದ್ರಪ್ಪ, ಮೊಗಳ್ಳಿ ಗಣೇಶ, ಚನ್ನಣವಾಲೀಕಾರ, ಅರವಿಂದ ಮಾಲಗತ್ತಿ, ಬಿ.ಟಿ. ಲಲಿತಾನಾಯಕ್, ಶಾಂತರಸ ಮುಂತಾದವರ ಕಥೆಗಳಲ್ಲಿ ವರ್ಗ ಜಾತಿ ಸಂಘರ್ಷ ವ್ಯಕ್ತವಾಗಿದೆ. ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಬರುವ ಪಾತ್ರಗಳು ಕೆಳಜಾತಿಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಲೇ ಮೇಲ್ಜಾತಿಯ ಪ್ರಧಾನ ಸಂಸ್ಕೃತಿಯನ್ನು ವಿರೋಧಿಸುತ್ತವೆ. ಪಾತ್ರಗಳು ಭಿನ್ನ ಭಿನ್ನ ಸ್ವರೂಪ ಹೊಂದಿವೆ. ವರ್ಗ ಮತ್ತು ಜಾತಿ ಸಂಘರ್ಷವು ಬೇರೆ ಬೇರೆ ನೆಲೆಯಲ್ಲಿ ಕಂಡುಬರುತ್ತದೆ. ನೇರವಾಗಿ ಮತ್ತು ಪರೋಕ್ಷವಾಗಿ ವ್ಯಂಗ್ಯ ವಿಡಂಬನೆಯ ಮೂಲಕ ವ್ಯಕ್ತವಾಗುತ್ತದೆ.

**'ತಮಂಧದ ಕೇಡು'** ಕಥೆಯಲ್ಲಿ ಜಮೀನುದಾರಿ ವ್ಯವಸ್ಥೆಯೊಳಗಿನ ಜೀತದಾಳುಗಳ ಬವಣೆ ಕಂಡುಬರುತ್ತದೆ. ಎರಡು ವರ್ಗಗಳ ರಾಜಕೀಯ ಸಂಘರ್ಷದ ವಸ್ತುವುಳ್ಳ ಕಥೆಯಾಗಿದ್ದು ತಣ್ಣನೆಯ ಜಾತಿಯ ಹೋರಾಟ ಕಂಡುಬರುತ್ತದೆ. ಕೆಲವೆಡೆ ತೀವ್ರ ಪ್ರತಿಭಟನೆ ಸಹ ಯಶಸ್ವಿಯಾಗದೆ ಸೋಲುಂಟಾಗುತ್ತದೆ. ಸಂಘರ್ಷವು ಸ್ತ್ರೀ ಪಾತ್ರಗಳ ಮೂಲಕವೂ ವ್ಯಕ್ತವಾಗುತ್ತದೆ. ಅನ್ಯಾಯ ಪ್ರತಿಭಟನೆ ಕೈಯಲ್ಲಿ ಕುಡುಗೋಲು ಹಿಡಿದರೆ ಮತ್ತೊಂದೆಡೆ **'ಹೊತ್ತುಮೂಡುವ ಸಮಯ'** ಕಥೆಯಲ್ಲಿ ಅಕ್ಕಮ್ಮ ಗಂಡನ ಕ್ರೌರ್ಯತೆ ನೀಚತನದಿಂದ ಬೇಸತ್ತು ದಲಿತರ ಹುಡುಗನ ದೈಹಿಕ ಸಂಬಂಧ ಬೆಳೆಸುತ್ತಾಳೆ. "ಮೋನಿ ಬಂದೂಕು ಹಿಡಿದ" ನಕ್ಸಲ್ ಮಾದರಿಯಲ್ಲಿ ಭೂಗತ ಹೋರಾಟ ಮಾಡುವುದು, ಇವೆಲ್ಲಾ ಒಂದು ನೈತಿಕ ಮತ್ತೊಂದು ಅನೈತಿಕ, ಇನ್ನೊಂದು ಕಾನೂನು ಬಾಹಿರ ಕೃತ್ಯದಂತೆ ಕಂಡುಬರುತ್ತದೆ. ಹೀಗೆ ವಿವಿಧ ಬಗೆಯ ಸಂಘರ್ಷಗಳು ನುಗಡೋಣಿಯವರ ಕಥೆಗಳಲ್ಲಿ ಕಂಡುಬರುತ್ತದೆ.

**ಪಕ್ಷಕ್ಕಲ್ಲದೆ ಪರಿಣಾಮ ಕಾಣಿಸದು** ಕಥೆಯ ವರ್ಗ ಸಂಘರ್ಷದ ಬಹುಮುಖ್ಯ ಪ್ರಾತಿನಿಧಿಕ ಕಥೆಯಾಗಿದೆ. ಆರ್ಥಿಕ ಅಸಮಾನತೆ ಪ್ಯೂಡಲ್‌ನ ಕ್ರೂರ ಪದ್ಧತಿಯನ್ನು ನಿರ್ಮೂಲನೆ ಮಾಡುವ ಪಣತೊಟ್ಟ ಗುಂಪೊಂದು ಭೂಗತ ಹೋರಾಟ ನಡೆಸುತ್ತದೆ. ಬಡವರ ಭೂಮಿಯನ್ನು ಕಬಳಿಸಿದ ಜಮೀನ್ದಾರನನ್ನು ಕೊಂದು ಅವರ ಭೂಮಿಯನ್ನು ಬಡವರಿಗೆ ಹಂಚುವ ತಂತ್ರ ರೂಪಿಸುತ್ತು. ಆರ್ಥಿಕ ಅಸಮಾನತೆಯ ವಿರುದ್ಧದ ಹೋರಾಟವನ್ನು ಶರಭನಗೌಡ 'ದಂಧೆ' ಎಂದು ಕರೆದರೆ ಪೋಲಿಸರು ಅದೇ ಗುಂಪನ್ನು 'ಭಯೋತ್ಪಾದಕರ ಗುಂಪು' ಎಂದೇ ಪರಿಗಣಿಸುತ್ತಾರೆ. ಆದರೆ ಬಿಸಿರಕ್ತದ ಯುವಕ, ಚಂದ್ರಪ್ಪಗೌಡ್ರೇ, ದಂದೆ ಅಂತ ಅಂದು ನನ್ನ ಅವಮಾನ ಮಾಡಿದ್ದೀರಿ! ಹೋರಾಟ ಅನ್ರೀ! ಚಳುವಳಿ ಅನ್ರೀ! ಇದು ಅಸ್ತಿತ್ವ ಇಲ್ಲದ ಜನರ ಪರ ಹೋರಾಟ! ಭೂ ರಹಿತರಿಗೆ ಅಸ್ತಿತ್ವ ನೀಡುವ ಚಳುವಳಿ ಎಂದು ಅರ್ಥೈಸುತ್ತಾನೆ."[7] ಹೋರಾಟದ ತುರ್ತನ್ನು ಇಲ್ಲಿ ಗುರುತಿಸಬಹುದು.

ಗೌಡ "ತಮ್ಮ ಬ್ರಿಟಿಷರನ್ನು ರಜಾಕಾರರನ್ನು ಈ ಪ್ರಾಂತ್ಯ ದೇಶ ಬಿಟ್ಟು ಓಡಿಸೋ ಚಳುವಳಿ ಸತ್ಯಾಗ್ರಹ ಮಾಡಿದ್ದೇನು?" ಎಂದಿದ್ದಕ್ಕ ಚಂದ್ರಪ್ಪ ಪ್ರತಿಕ್ರಿಯಿಸುತ್ತಾ ಅವರನ್ನು ಕಳಿಸಿ ಅವರ ಜಾಗದಲ್ಲಿ ನೀವು ಕುಂತಿದ್ದೀರಲ್ಲ. ಗೌಡ್ರೇ ಅವರಿಗಿಂತ ನೀವು ಬಾಳ ಅಪಾಯ! ಚಂದ್ರಪ್ಪ ಬಿಸಿಯಾದ, ಗೌಡ ತಣ್ಣಗಾದ.[5] ಇಲ್ಲಿ ಸಾಮ್ರಾಜ್ಯಶಾಹಿ ವ್ಯವಸ್ಥೆಯಷ್ಟೇ ಫ್ಯೂಡಲ್ ವ್ಯವಸ್ಥೆ ಕೂಡ ಕ್ರೂರವಾದುದು ಎಂಬುದು ಗಮನಾರ್ಹವಾದುದು.

ಫ್ಯೂಡಲಿಸಂಗೆ ತಕ್ಕ ಉತ್ತರವನ್ನು ಕ್ರಾಂತಿಯ ಧ್ಯೇಯೋದ್ದೇಶಗಳನ್ನು ಕುರಿತು "ಚರಿತ್ರೆಯೊಳಗೆ ಮನುಷ್ಯ ಕೇವಲ ದೈಹಿಕ ಬಲದಿಂದ ಬದುಕಿಲ್ಲ, ಸಾಮ್ರಾಜ್ಯ ಕಟ್ಟಿಲ್ಲ, ಕಟ್ಟಿದ್ದು ಈ ಬಂದೂಕಿನಿಂದ" ಎಂದು ರಕ್ತಪಾತವನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಸಮರ್ಥಿಸಲಾಗಿದೆ.[6] ಫ್ಯೂಡಲಿಸಂನ್ನು ಅಂತ್ಯಗೊಳಿಸುವ ದಿಟ್ಟತನ ಮರೆದಿದೆ. ನರಸನಗೌಡ, ತಳವಾರಯಂಕಪ್ಪನನ್ನು ಕೊಂದದ್ದು ಪ್ರಸ್ತುತ ನಕ್ಸಲ್ ಚಳುವಳಿಯ ಸ್ವರೂಪವನ್ನೇ ಯಥಾವತ್ತಾಗಿ ಬಿಂಬಿಸುತ್ತದೆ.

ಜಮೀನ್ದಾರರು ತಮ್ಮ ಮನೆಯಲ್ಲಿ ತಲತಲಾಂತರದಿಂದ ದುಡಿಯುವವರಿಗೆ ಅನ್ನ ಆಹಾರ ಕೊಟ್ಟು ಸಲಹಿದರೇ ಹೊರತು ಅವರನ್ನೆಂದೂ ಮೇಲೆತ್ತಲೇ ಇಲ್ಲ. ಶಾಶ್ವತ ಬದುಕಿಗೊಂದಿಷ್ಟು ಭೂಮಿಯ ಅನಿವಾರ್ಯತೆಯನ್ನು "ನನ್ನ ತಾತಂದಿರಿಗೆ ನೀನು ಕೊಟ್ಟದ್ದು ಅಂಗೈ ಅಗಲದ ರೊಟ್ಟಿ ಕೊಟ್ಟಿರಿ ಆ ರೊಟ್ಟಿ ಬೆಳೆವ ಭೂಮಿನ್ನ ನೀವು ಇಟ್ಟಗೊಂಡಿರಿ, ಈಗ ಭೂಮಿನ ಕೊಟ್ಟು ಬಿಡ್ರಿ! ಗೌಡ್ರ ರೊಟ್ಟಿ ಬೆಳಕಂಡು ತಿಂತಾರ ಕೇರಿಮಂದಿ"[7] ಎಂದ ಚಂದ್ರಪ್ಪ.

ತಾತ್ಕಾಲಿಕ ಹಸಿವಿನ ತೀವ್ರತೆಯನ್ನು ನಿವಾರಿಸಿ ಅವರನ್ನು ಜೀತದಾಳುಗಳಾಗಿ ದುಡಿಸಿಕೊಳ್ಳುವ ಬದಲು ಅವರಿಗೆ ಶಾಶ್ವತವಾಗಿ, ಸ್ವಾವಲಂಬಿಗಳಾಗಿ ಬದುಕಲು ಅವಕಾಶ ಕಲ್ಪಿಸಬೇಕೆಂಬ ಕಳಕಳಿಯೇ ವರ್ಗ ಸಂಘರ್ಷದ ಮೂಲಗುರಿಯಾಗಿದೆ.

ಇ) ಧರ್ಮ

ಧರ್ಮವೆಂಬುದು ಮನುಷ್ಯನ ಜೀವನ ವಿಧಾನದ ಅವಿಭಾಜ್ಯ ಅಂಗವಾಗಿ ಬೆಳೆದು ಬಂದಿದೆ. ಮನುಷ್ಯನು ಸಮಾಜಜೀವಿಯಾಗಿ ಬದುಕು ಪ್ರಾರಂಭಿಸಿದಂದಿನಿಂದ ಧರ್ಮ, ದೇವರು ಕಟ್ಟುಪಾಡುಗಳನ್ನು ಆಚರಣೆಗಳನ್ನು ತನಗೆ ಅನುಕೂಲಕರವಾಗಿ ಸೃಷ್ಟಿಸಿಕೊಂಡನು. 'ಮನುಷ್ಯ ದೇವರನ್ನು ಕಲ್ಪಿಸಿಕೊಂಡು ಸೃಷ್ಟಿಸಿದರೂ ಸಹ ಕ್ರಮೇಣ ದೇವರೆ ಮನುಷ್ಯನನ್ನು ಸೃಷ್ಟಿಸಿದ' ಎಂಬ ಭ್ರಮೆಗೆ ಒಳಗಾದ. ದೇವರು ಧರ್ಮ ಇಡೀ ಸಮಾಜವನ್ನು ನಿಯಂತ್ರಿಸುವ ಮಟ್ಟಿಗೆ ಪ್ರಭಾವ ಬೀರುವ ಅಂಶಗಳಾದವು. ಸಮಾಜದ ನೆಮ್ಮದಿ, ಕ್ಷೇಮಕ್ಕಾಗಿ ಸೃಷ್ಟಿಸಿಕೊಂಡ ಧರ್ಮವನ್ನು ಕ್ರಮೇಣ ಮನುಷ್ಯರು ತಮ್ಮ ಸ್ವಾರ್ಥಕ್ಕಾಗಿ

ಬಳಸಿಕೊಳ್ಳಲಾರಂಭಿಸಿದರು. ಕಾಲಾನಂತರ ದೇವಾಲಯಗಳು ಶೋಷಣೆಯ ಕೇಂದ್ರಗಳಾಗಿ ರೂಪುಗೊಂಡವು.

ದೇವಾಲಯಗಳು ಮನುಷ್ಯನನ್ನು ಉದ್ಧಾರ ಮಾಡುವ ಶ್ರದ್ಧಾಕೇಂದ್ರಗಳಾಗುವ ಬದಲು ಮೂಢನಂಬಿಕೆಯನ್ನು ಪೋಷಿಸುವ ಪುರೋಹಿತಶಾಹಿಯನ್ನು ಪ್ರಾಬಲ್ಯಗೊಳಿಸುವ ಶಕ್ತಿಕೇಂದ್ರಗಳಾದವು. ಈ ದೇಶದ ಮೂಲನಿವಾಸಿಗಳಾದ ದಲಿತರಿಗೆ ಧಾರ್ಮಿಕ ಹಕ್ಕುಗಳನ್ನೇ ನಿರಾಕರಿಸಿದ್ದು ವಿಪರ್ಯಾಸ. ಕೇವಲ ಮೇಲು ವರ್ಗದವರಿಗೆ ಮಾತ್ರ ದೇವರನ್ನು ಸ್ಪರ್ಶಿಸಲು, ಪೂಜಿಸಲು, ದೇವಾಲಯ ಪ್ರವೇಶಕ್ಕೆ ಅವಕಾಶ ಕಲ್ಪಿಸಿ ದಲಿತರಿಗೆ ಅಸ್ಪೃಶ್ಯರಿಗೆ ಪ್ರವೇಶ ನಿರಾಕರಿಸಲಾಯಿತು. ವೇದಾಧ್ಯಯನದಿಂದ ದಲಿತರು ದೂರವೇ ಉಳಿದರು.

ದೇವರ ಪೂಜೆಗೂ ಬೇಧಭಾವ ಮಾಡಲಾಯಿತು. ಮೇಲ್ವರ್ಗದವರು ಶ್ರೇಷ್ಠತೆಯ ಹೆಸರಿನ ಶಿವ, ನಾರಾಯಣ, ಸರಸ್ವತಿ, ಗಣೇಶ, ರಾಘವೇಂದ್ರ, ಲಕ್ಷ್ಮೀ ಮುಂತಾದ ದೇವರನ್ನು ಪೂಜಿಸಿದರೇ, ದಲಿತರು ಮಾರಮ್ಮ, ಕೆಂಚಮ್ಮ, ದುರ್ಗಮ್ಮ, ಚೌಡಮ್ಮ, ಜುಂಜಪ್ಪ, ಭೂತಪ್ಪ ದೇವರನ್ನು ಪೂಜಿಸುವುದು ಅನಿವಾರ್ಯವಾಗಿತ್ತು. ದಲಿತ ಕಥೆಗಳಲ್ಲಿ ಧರ್ಮ ಆಧ್ಯಾತ್ಮಿಕತೆ ಮಹತ್ವದ ಪ್ರಭಾವ ಬೀರುತ್ತದೆ. ತಮ್ಮ ಪರಿಧಿಯೊಳಗೆ ತಮ್ಮದೆ ಆದ ಧಾರ್ಮಿಕ ಲೋಕವನ್ನು ಸೃಷ್ಟಿಸಿಕೊಂಡು ತಮ್ಮ ದೈವಕ್ಕೆ ಅಧೀನವಾಗಿ ಬದುಕು ಕಂಡರು.

ನುಗಡೋಣಿಯವರ ಕಥೆಗಳಲ್ಲಿ ಧಾರ್ಮಿಕತೆಯು ಹಾಸುಹೊಕ್ಕಾಗಿದೆ. ರಾಯಚೂರು ಭಾಗದ ಹಬ್ಬ ಹರಿದಿನ, ಜಾತ್ರೆ, ಉತ್ಸವಗಳು, ಸಂಪ್ರದಾಯಗಳು ಕಥೆಗಳಲ್ಲಿ ಕಂಡುಬರುತ್ತವೆ. "ದೈವಕ್ಕೆ ಮೊದಲು **ಶರಣೆಂಬೆವು**" ಕಥೆಯು ದೈವೀಕತೆಯನ್ನೇ ಪ್ರಧಾನ ಆಶಯವಾಗಿ ಸಾರುತ್ತದೆ. ದೇವರು ಮನುಷ್ಯರಿರುವ, ದೇವರು ಮತ್ತು ಸಮಾಜದ ನಡುವಿನ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಗ್ರಾಮದ ಸಮಸ್ತ ಜನತೆಯನ್ನೇ 'ದೈವ ಎಂದು ಸಂಬೋಧಿಸುವುದು' ಸಮುದಾಯ ಪ್ರಜ್ಞೆಗೆ ದೈವೀಕತೆಯ ಜೊತೆಯಿರುವ ಅವಿನಾಭಾವ ಸಂಬಂಧ ತೋರುತ್ತದೆ.

"ದೈವಕ್ಕೆ ಮೊದಲು ಶರಣೆಂಬೆವು" ಕಥೆಯಲ್ಲಿ ಪಾತಪ್ಪ ದೇವರ ಜಾತ್ರೆ ಬಹುಮುಖ್ಯವಾಗಿದೆ. ಉಚ್ಚಯ್ಯವನ್ನು ಎಳೆಯುವುದು ಸಂಪ್ರದಾಯ ಮಾದಪ್ಪ ಇಬ್ಬರೂ ಸೇರಿ "ಪಾತಪ್ಪ ದೇವರ ಕಥನ ಮಾಡಿ ಇಡೀ ಗ್ರಾಮಸ್ಥರನ್ನು ಭಕ್ತಿಯ ಅತಿಯಲ್ಲಿ ತೇಲಿಸುವುದು" ಬಹುಕಾಲದಿಂದ ಬಂದಿರುವುದು ಪಾತಪ್ಪ ದೇವರ ಜಾತ್ರೆಯ ಕುರಿತು ಕಥನ ಬಗ್ಗೆ ವಿವರಣೆ ಹೀಗಿದೆ.

"ಎಳ್ಳಮವಾಸಿ ದಿನ ಸಂಜೆ ಪಾತಪ್ಪದೇವರ ಜಾತ್ರೆ ಈ ನಡುಗಡ್ಡೆ ನಾಡಿಗೆ ಸಂಭ್ರಮ. ನಡುಗಡ್ಡೆಯ ಆರೇಳು ಸಣ್ಣ ಸಣ್ಣ ಊರುಗಳಿಗೆ ಪಾತಪ್ಪನೇ ದೈವ. ಜಾತ್ರೆಯ ದಿನ ಪಾತಪ್ಪ ದೇವರ ಒಕ್ಕಲು ಮಕ್ಕಳೆಲ್ಲಾ ಪಾತಪ್ಪ ದೇವರ ಗಡ್ಡೆಗೆಬಂದು ನೆರೆವರು. ಮುಂಜಾನೆಯಿಂದ ಸಂಜೆಯವರೆಗೆ ನದಿಗುಂಟ ಬೀಡುಬಿಟ್ಟು ಅಡಿಗೆ ಮಾಡಿಕೊಂಡು "ಪಾತಪ್ಪ ದೇವರನ್ನು ಮಾಡಿ" ಅದರ ಸುತ್ತ ಉಂಡು ಮುಗಿಸುತ್ತಾರೆ. ಸಂಜೆ ಉಚ್ಛಯ್ಯವನ್ನು ಎಳೆದು ಬಿಟ್ಟರ ಕತ್ತಲಾಗುತ್ತಿದ್ದಂತೆ ನೆರೆದವರೆಲ್ಲ ಗುಡಿ ಪೌಳಿಯೊಳಗೆ ಮಾದಪ್ಪ-ಪಾತವ್ವ ಸೇರಿ ಪಾತಪ್ಪದೇವರ ಕಥನ ಮಾಡುವುದನ್ನೇ ಕೇಳಲು ಕಾಯ್ದು ಕೂರುತ್ತಿದ್ದರು. ಅದೇ ನಡುಗಡ್ಡೆಯ ದೈವಸ್ಥರಿಗೆ ನಿಜವಾದ ಜಾತ್ರಿಯಾಗಿರುತ್ತಿತ್ತು. ಮಾದಪ್ಪ-ಪಾತವ್ವ ಮಾಡುವ ಪಾತಪ್ಪ ದೇವರ ಕಥನವನ್ನು ಕೂಡಿದ ಒಕ್ಕಲು ಮಕ್ಕಳು ಒಳಗಾಗುವ ತನಕ ಕಣ್ಣಿಗೆ ಕಣ್ಣು ಹಚ್ಚಿದಂತೆ ಭಕ್ತಿಯಿಂದ ಮೈತುಂಬ ನೋಡುತ್ತಾ ಕೇಳುತ್ತ ಪಾವನರಾಗುತ್ತಿದ್ದರು. ಕಥನ ಮಾಡುವ ಮಾದಪ್ಪ-ಪಾತವ್ವ ಇಬ್ಬರೂ ಅಂದು ಎಲ್ಲರ ಕಣ್ಣಲ್ಲಿ ಕುಣಿಯುವರು. ಅಂದು ದೈವಸ್ಥರು ಒಮ್ಮನಸ್ಸಿನಿಂದ ಕೊಡುವ ಧಾನ-ಧರ್ಮ ಅವರಿಬ್ಬರ ಬದುಕುಬಾಳೇವು ವರ್ಷವಿಡೀ ನೆಮ್ಮದಿಯಿಂದ ಇರುತ್ತಿತ್ತು."[18]

ಇಲ್ಲಿ ದೈವದ ಆಚರಣೆಯು ಜಾತಿ ಮತದ ಕಟ್ಟುಗಳನ್ನು ಮೀರಿ ಬೆಳೆಯುತ್ತದೆ. ದೈವವು ಇಲ್ಲಿ ಶೋಷಣೆಯ ಬದಲಾಗಿ, ಕೆಳ ಸಮುದಾಯದ ಕುಟುಂಬದ ಆರ್ಥಿಕ ಸುಸ್ಥಿರ ಬದುಕಿಗೆ ವರದಾನವಾಗಿ ಪರಿಣಮಿಸಿದೆ. ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಇಲ್ಲಿ ಪಾತಪ್ಪನ ಜಾತ್ರೆಯು ಪ್ರತಿನಿಧಿಸುತ್ತದೆ. ಧರ್ಮವೆಂಬುದು ಇಲ್ಲಿ ಬದುಕಿಗೆ ಪೂರಕವಾಗಿದೆ. ತಮ್ಮ ಸ್ವಾರ್ಥ, ದುರಾಸೆಗೆ ಧರ್ಮ ಮೇಲ್ವರ್ಗದವರ ಸ್ವತ್ತಾಗದೇ ಕಥೆಯಲ್ಲಿ ವ್ಯತಿರಿಕ್ತವಾಗಿ ಬಿಂಬಿತವಾಗಿದೆ. ಮೇಲ್ವರ್ಗವೇ ಇಲ್ಲಿ ಹೃದಯವಂತಿಕೆಯನ್ನು ಮರೆಯುವುದು ವಿಶೇಷ.

ಮಾದಪ್ಪ ತನ್ನ ಪ್ರತಿಭೆಗೆ ತಕ್ಕಂತೆ ಪ್ರೋತ್ಸಾಹ ರೂಪದಲ್ಲಿ ಹಣ ದೊರಕುತ್ತಿದ್ದಂತೆ ಆತನ ಬದುಕೇ ಬದಲಾಗುತ್ತದೆ. ಅತಿಯಾಸೆಗೆ ಬಲಿಯಾಗಿ 'ಮದ್ಯ ವ್ಯಸನಿ'ಯಾಗಿ 'ಧನದಾಹಿ'ಯಾಗಿ 'ಪಾತಪ್ಪ ದೇವರ ಕಥನ' ಪರಂಪರೆಯನ್ನೇ ವ್ಯವಹಾರಿಕವಾಗಿ ಬದಲಾಯಿಸಿಕೊಳ್ಳುತ್ತಾನೆ. ಧನದ ಮೇಲಿನ ದುರಾಸೆಗೆ ಆತನು ಶ್ರದ್ಧೆಯನ್ನು ಹಾಳುಮಾಡಿಕೊಂಡು ದೈವದಿಂದ ತಿರಸ್ಕಾರಕ್ಕೊಳಗಾಗುತ್ತಾನೆ. ಮುಂದಿನ ಸಲ ದೈವದಿಂದ ವೀಳ್ಯ ಬಾರದಿದ್ದಕ್ಕ ಕಂಗಾಲಾಗುತ್ತಾನೆ. ತಾತ್ಕಾಲಿಕ ಸುಖದ ಆಸೆಗೆ ಬಲಿಯಾಗಿ ಶಾಶ್ವತ ನೆಮ್ಮದಿಯ ಬದುಕನ್ನೇ ಕಳೆದುಕೊಂಡು ಪಶ್ಚಾತ್ತಾಪಪಡುತ್ತಾನೆ.

ಆದರೆ ತಾನು ನಂಬಿದ ದೈವ ಆತನನ್ನು ಕೈಬಿಡುವುದಿಲ್ಲ. ಊರ ಹಿರಿಯವರು ಪುನಃ ಆತನಿಗೆ 'ಪಾತಪ್ಪ ದೇವರ ಕಥನ'ಕ್ಕೆ ವೀಳ್ಯ ನೀಡಿದಾಗ ಭರವಸೆಯ ಬದುಕು ಗರಿಗೆದರುತ್ತದೆ. ಇಲ್ಲಿ ವಿಭಿನ್ನ ರೀತಿಯಲ್ಲಿ ಧರ್ಮದ ಮಹತ್ವ ಕಂಡು ಬರುತ್ತದೆ. "ಕೊರಡು ಕೊನರುವ ಪರಿ" ಕಥೆಯು

ಹಳ್ಳಿಯೊಂದರ ಧಾರ್ಮಿಕ ಚಿತ್ರಣವನ್ನು ಅನಾವರಣಗೊಳಿಸುತ್ತದೆ. ಮಠದಲ್ಲಿ ನಡೆಯುವ ಸಾಮೂಹಿಕ ವಿವಾಹದ ಸನ್ನಿವೇಶ ತುಂಬಾ ನಾಟಕೀಯ ರೂಪ ಪಡೆದು ಧಾರ್ಮಿಕ ಸೂಕ್ಷ್ಮತೆಗಳನ್ನು ಬಿಚ್ಚಿಡುತ್ತದೆ. ಪ್ರಸ್ತುತ ಮಠದ ಸ್ವಾಮೀಜಿ ಏರ್ಪಡಿಸುವ ಸಾಮೂಹಿಕ ಮದುವೆ ಕಾರ್ಯಕ್ರಮ ರಾಜಕೀಯ, ಧರ್ಮ ಒಂದಕ್ಕೊಂದು ನಿಕಟ ಸಂಬಂಧ ಹೊಂದಿದೆ.

ಪ್ರಸ್ತುತ ಕಾವಿಧಾರಿಗಳ ಕಪಟತನ, ವಂಚನೆ, ಕಾಮುಕತೆ ಕಥೆಯಲ್ಲಿ ಹಂತ ಹಂತವಾಗಿ ಗೋಚರವಾಗುತ್ತದೆ. ಹೈದರಾಬಾದ್ ಕರ್ನಾಟಕದ ವಿಶೇಷ ವ್ಯಕ್ತಿಗಳಾದ ಕಾಲಜ್ಞಾನಿಗಳಾದ ಕೊಡೆಕಲ್ಲುಸಾರ ಸಾರುವಯ್ಯನವರ ಆಗಮನ, ಅವರ ಹೇಳಿಕೆಯು ಮಠದ ಸ್ವಾಮಿಯನ್ನು ತಲ್ಲಣಗೊಳಿಸುತ್ತದೆ. ಮುಂದೆ ನಡೆಯುವುದನ್ನು ಹೇಳುವ ಸತ್ಯಜ್ಞಾನಿಗಳು, ತ್ರಿಕಾಲ ಜ್ಞಾನಿಗಳು ಎಂಬುದು ಆ ಭಾಗದ ನಂಬಿಕೆ ಆ ನೆಲದ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನ ಪಡೆದವರು ಎಂಬುದನ್ನು ಸೂಚಿಸುತ್ತದೆ.

"ಕೊಡೆಕಲ್ಲು ಸಾರುವಯ್ಯ ಕಣ್ಣ ಕೋರೈಸುವಂಥ ಝುಗ ಝುಗಿಸುವ ಬೆಳಕಿನಲ್ಲಿ ನಿಂತಿದ್ದ ಈ ಜಂಗಮ ಕಾವಿಯ ನಿಲುವಂಗಿತೊಟ್ಟಿದ್ದ ಕೊರಳಲ್ಲಿ ಲಿಂಗ-ರುದ್ರಾಕ್ಷಿಸರ ತಲೆಗೆ ರುಮಾಲು ಹಣೆಯ ಮೇಲೆ ಒಡೆದು ಕಾಣುತ್ತಿದ್ದ ವಿಭೂತಿ. ಎಡಗೈಯಲ್ಲಿ ಬೆಳಗಿದ ಕಂದಿಲೂ ಹಿಡಿದು ನಿರ್ಲಿಪ್ತವಾಗಿ 'ಎಚ್ಚರಿಕೆ ಮಂದಮತಿಗಳೇ ಎಚ್ಚರಿಕೆ! ಒಳ್ಳೆಯ ಕಾಲ ಮರೆಯಾದವಣ್ಣ' ಕೇಡುಗಾಲವೇ ಇಲ್ಲಿ ಮೇಲ್ಲಣ್ಣ! ಊರುಕೇರಿಯನ್ನು ಸುಲಿಯಲು ಬರುವರಣ್ಣ ಬಾಳೆಲ್ಲ ರಣರಂಗವಣ್ಣ! ಗುಪ್ತದ ನುಡಿಯಿದು ಗುಪ್ಪದಲ್ಲಿ ಅರಿಯರಣ್ಣ ಲಿಂಗಕ್ಕೂ ಜ್ಯೋತಿಗೂ ಜಗಳವಣ್ಣ! ಎಂದು ಸಾರಿದರು."[7] ಇದು ಪ್ರಸ್ತುತ ವಾಸ್ತವ ಸಮಾಜದ ಚಿತ್ರಣ, ವಿಡಂಬನೆಯನ್ನು ನೇರವಾಗಿಯೇ ಹೇಳುವಂತಹುದು. ಸ್ವಾಮೀಜಿಯ ಸ್ವಾರ್ಥಪರ ಚಿಂತನೆಗಳ ಬಗ್ಗೆ ಜಾಗೃತಿಯ ಮನೋಭಾವ ಹೊಂದಿರಬೇಕು ಎಂದು ಸಾಮಾನ್ಯರಿಗೆ ನೀಡುವ ಎಚ್ಚರಿಕೆಯ ಕರೆಗಂಟೆಯಾಗಿದೆ. ಈ ಮಾತು ಕೇಳಿ ಸ್ವಾಮೀಜಿಯ ಮುಖ ಕಳೆಗುಂದುವುದಕ್ಕೂ ನೇರ ಸಂಬಂಧವಿದೆ. ಡಾಂಭಿಕ ಮಠಾಧಿಪತಿಗಳ ನಿಜವಾದ ಬಣ್ಣ ಇದರಲ್ಲಿ ಬಯಲಾಗುತ್ತದೆ.

ಹಿಂದಿನ ಕಾಲದ ಮಠಗಳು ಸಮಾಜದ ಜೀವನಾಡಿಗಳಾಗಿದ್ದವು. ಎಲ್ಲ ವರ್ಗಗಳನ್ನು ಜಾತಿಗಳನ್ನು ತನ್ನ ಒಡಲಲ್ಲಿಟ್ಟುಕೊಂಡು ಪೋಷಿಸುತ್ತಿದ್ದವರು. ಎಲ್ಲಾ ವರ್ಗಗಳ ಶ್ರದ್ಧಾ ಕೇಂದ್ರಗಳಾಗಿದ್ದವು. ಏಳಿಗೆಗಾಗಿ, ಸರ್ವೋದಯಕ್ಕಾಗಿ, ಸಮಾನತೆಗಾಗಿ ದುಡಿಯುತ್ತಿದ್ದವು. ಆದರೆ ನಂತರದ ಮಠಗಳು ರಾಜಕೀಯ, ಜಾತಿ ಪ್ರತಿಷ್ಠೆಗಳಿಗೆ ಸಿಲುಕಿ ಶೋಷಣೆಯ ಕೇಂದ್ರಗಳಾದವು. ಮೇಲು ಜಾತಿಯವರ ಸ್ವತ್ತಾಗಿ ಜನ ಸಾಮಾನ್ಯರಿಂದ, ದಲಿತರಿಂದ ದೂರವಾದವು. ಅರಿಷಡ್ವರ್ಗಗಳನ್ನು ಜಯಿಸಿದ ಸ್ವಾಮಿಜಿಯೇ ಕಾಮಕ್ಕ ಸಿಲುಕಿ 'ಚುಕ್ಕಿ'ಯ ಮೇಲೆ ಅತ್ಯಾಚಾರಕ್ಕೆ ಪ್ರಯತ್ನಿಸುವುದು ಅಮಾನವೀಯವಾಗಿ ಕಂಡು ಬರುತ್ತದೆ.

ಧರ್ಮವನ್ನು ಕಾಪಾಡುವವರೇ ನೈತಿಕ ನಿಯಮಗಳನ್ನು ಗಾಳಿಗೆ ತೂರಿ ಮೃಗಗಳಂತೆ ವರ್ತಿಸುವುದು ಸರಿಯೆ? ಹಾಗಾದರೆ ಧರ್ಮ ಹೇಳುವುದಾದರೂ ಏನನ್ನು? ಇತ್ಯಾದಿ ಧಾರ್ಮಿಕ ಸಡಿಲತೆಗಳನ್ನು ಸೂಕ್ಷ್ಮವಾಗಿ ವಿವರಿಸುತ್ತದೆ.

**'ಸವಾರಿ'** ಕಥೆಯು ಧರ್ಮವನ್ನೇ ಸ್ವಾರ್ಥ ಸಾಧನೆಗಾಗಿ ಬಳಸಿಕೊಳ್ಳುವ ಬಂಡವಾಳಶಾಹಿಯ ಹೀನ ಪ್ರವೃತ್ತಿಯನ್ನು ತೋರಿಸುತ್ತದೆ. ವಜ್ರಪ್ಪ ಕಂಡ ಕನಸು ಎಂದು ಸುಳ್ಳಾಗಿರಲಿಲ್ಲ. ಆದರೆ ಹಣ, ಹೆಂಡ, ಆಮಿಷಗಳ ಮುಂದೆ ದೈವದ ಅಸ್ತಿತ್ವವೇ ಸುಳ್ಳೆಂದು ಸಾಬೀತಾದಾಗ ಆತ ನಿರಾಸೆಯಿಂದ ಪ್ರಾಣ ಬಿಡುತ್ತಾನೆ. ಆದರೆ "ಸತ್ಯವೆಂಬಹುದು ಬೂದಿ ಮುಚ್ಚಿದ ಕೆಂಡದಂತೆ ಒಂದಲ್ಲ ಒಂದು ದಿನ ಸ್ಫೋಟಗೊಳ್ಳುತ್ತದೆ" ಎಂಬಂತೆ ಸುಡುಗಾಡು ಸಿದ್ದನಿಗೆ ಮಲ್ಲನಗೌಡನ ನಿಜ ಸ್ವರೂಪ ಗೊತ್ತಾದಾಗ 'ದೈವಕ್ಕೆ ದ್ರೋಹ ಬಗೆದೆ' ಎಂದು ಪಶ್ಚಾತ್ತಾಪ ಪಡುತ್ತಾನೆ.

**'ಮೀರುವ ಘನ'** ಕಥೆಯು ಸಂಸಾರದ ಭವಬಂಧವನ್ನು ದಾಟಿದ ಜೀವವೊಂದು ಆಧ್ಯಾತ್ಮದ ಉತ್ತುಂಗಕ್ಕೆರಿದುದನ್ನು ತಿಳಿಸುತ್ತದೆ. **'ಜೋಗುಳ ನಿಂದಲ್ಲಿದೆ'** ಕಥೆಯು ಸಾಂಸಾರಿಕ ಬದುಕಿನಿಂದ ವಿಮುಖವಾದ ಜೀವವೊಂದು ಬದುಕಿನ ನಿಜವಾದ ಆತ್ಮಶೋಧನೆಯತ್ತ ತುಡಿಯುವುದು, ಪುಣ್ಯಧಾಮವನ್ನು ಅರಸುತ್ತಾ ಹೋಗಿ 'ಜಲದುರ್ಗದ ಸಂಗಮೇಶ್ವರ' ಸನ್ನಿಧಿಯಲ್ಲಿ ಕಂಡ ಸತ್ಯ ಘಟನೆಗಳು ಹಾಗೂ ಅತೀಂದ್ರಿಯ ಅನುಭವಗಳು ಅಗಾಧ ಪರಿಣಾಮ ಬೀರುವುದನ್ನು ಇಲ್ಲಿ ಕಾಣಬಹುದು.

ಅಜ್ಞಾನವೆಂಬ ತೊಟ್ಟಿಲೊಳಗೆ
ಜ್ಞಾನವೆಂಬ ಶಿಶುವ ಮಲಗಿಸಿ
ಸಕಲ ವೇದ ಶಾಸ್ತ್ರವೆಂಬ ನೇಣುಕಟ್ಟಿ
ಹಿಡಿದು ತೂಗಿ ಜೋಗುಳವಾಡುತ್ತಿದ್ದಾಳ ಕ್ರಾಂತಿಯೆಂಬ ತಾಯಿ
ತೊಟ್ಟಿಲು ಮುರಿದು ನೇಣು ಹರಿದು, ಜೋಗುಳ ನಿಂದಲ್ಲದ
ಗುಹೇಶ್ವರನೆಂಬ ಲಿಂಗವ ಕಾಣಬಾರದು.

ಅಲ್ಲಮಪ್ರಭುಗಳ ಈ ವಚನ ಕಥೆಗೆ ಪೋಷಕವಾಗಿದ ಮಾಯಪ್ಪನ ಬದುಕು, ಸಾಗಿದ ದಾರಿ, ಇಡೀ ಓದುಗ ಸಮುದಾಯವನ್ನೇ ತನ್ನೊಡನೆ ಪಯಣಿಸುವಂತೆ ಮಾಡುತ್ತದೆ. ಹೀಗೆ ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಧರ್ಮವು ಮಹತ್ವದ ಪಾತ್ರವಹಿಸುತ್ತದೆ.

ಈ. ಮನುಷ್ಯ ಸಂಬಂಧಗಳು :

'ಮಾನವ ಸಮಾಜಜೀವಿ' ಮನುಷ್ಯನು ಪ್ರಾಣಿಗಳಿಗಿಂತ ಭಿನ್ನ ವಿವೇಚನಾ ಶಕ್ತಿಯನ್ನು, ವಾಕ್ ಶಕ್ತಿಯನ್ನು ಪಡೆದಿರುವುದರಿಂದಲೇ ಮನುಷ್ಯ ಶ್ರೇಷ್ಠ ಎನಿಸಿದ್ದಾನೆ. ಮನುಷ್ಯ ಸಂಬಂಧಗಳ ಸಂಕೋಲೆಯ ನಡುವೆ ಸಿಲುಕಿದ್ದಾನೆ. ತಾನು ಜೀವಿಸುವ ಪರಿಸರ, ಮನೆ, ಬಂಧು ಬಳಗ, ಸಮಾಜ ಹಳ್ಳಿ ಇವುಗಳ ನಡುವಿನ ಸಂಬಂಧ ಹೊಂದಿದ್ದಾನೆ. 'ಸಂಬಂಧಗಳಿಲ್ಲದ ಬದುಕು ಬದುಕೇ ಅಲ್ಲ' ಅದು ಕೇವಲ ಶುಷ್ಕತೆಯಿಂದ ಬರಡು ಭೂಮಿಯಂತಾಗುತ್ತದೆ. ರಕ್ತ ಸಂಬಂಧ, ಕರುಳು ಬಳ್ಳಿಯ ಸಂಬಂಧಗಳು ಮನುಷ್ಯನ ಬದುಕಿನಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಹಾಗೆಯೇ ಅದಕ್ಕೆ ಪೂರಕವಾದ ತಂದೆ–ತಾಯಿ, ಮಕ್ಕಳು, ಗಂಡ–ಹೆಂಡತಿ, ಸ್ನೇಹ ಸಂಬಂಧಗಳು ಅನಿವಾರ್ಯವಾಗಿವೆ. ಸಂಬಂಧಗಳನ್ನು ಉಳಿಸಿಕೊಳ್ಳಲು ಮನುಷ್ಯ ನಿರಂತರ ಪ್ರಯತ್ನ ನಡೆಸುತ್ತಾನೆ. ಸಂಬಂಧಗಳ ನಡುವೆ ಪರಸ್ಪರ ಪ್ರೀತಿ, ನಂಬಿಕೆ ಗೌರವಗಳಿದ್ದಾಗ ಬದುಕು ಅರ್ಥಪೂರ್ಣವೆನಿಸುತ್ತದೆ.

ಮನುಷ್ಯನ ಸಂಬಂಧಗಳಲ್ಲಿ ಬಿರುಕು ಕಾಣಿಸಿಕೊಂಡರೆ ಬದುಕೇ ನರಕಮಯವಾಗುತ್ತದೆ. ಬಹುತೇಕ ಸಂದರ್ಭಗಳಲ್ಲಿ ಸ್ವಾರ್ಥ, ಅಸಹನೆ ಶಂಕೆಗಳಿಂದಲೇ ಸಂಬಂಧಗಳು ಹಳಸಿ ಹೋಗುತ್ತವೆ. ಪರಸ್ಪರ ತ್ಯಾಗ, ಬದ್ಧತೆಗಳಿಂದ ಮನುಷ್ಯ ಸಂಬಂಧಗಳು ಗಟ್ಟಿಕೊಳ್ಳುತ್ತವೆ. ಆಧುನಿಕತೆ, ಜಾಗತೀಕರಣ, ಶೋಷಣಾ ಪ್ರವೃತ್ತಿಗಳು ಮನುಷ್ಯ ಸಂಬಂಧಗಳನ್ನು ಆಹುತಿ ತಗೆದುಕೊಳ್ಳುತ್ತವೆ. ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಮನುಷ್ಯ ಸಂಬಂಧಗಳು ಮಹತ್ವದ್ದಾಗಿವೆ. ಕೆಲವೆಡೆ ಸಂಬಂಧಗಳ ಶಿಥಿಲತೆಯಿಂದ ಬದುಕು ಸೂತ್ರ ಹರಿದ ಗಾಳಿಪಟದಂತೆ ಅಯೋಮಯವಾಗುತ್ತದೆ. ನುಗಡೋಣಿಯವರ ಕಥೆಗಳಲ್ಲಿ ಅವರು ಬಾಲ್ಯದಲ್ಲಿ ತಮ್ಮ ಪರಿಸರ ಕುಟುಂಬದೊಡನೆ, ಹಳ್ಳಿಯೊಡನೆ ಹೊಂದಿರುವ ಸಂಬಂಧವನ್ನು ಹೀಗೆ ಹೇಳುತ್ತಾರೆ.

"ಮನುಷ್ಯ ಸಂಬಂಧಗಳನ್ನು ಕುರಿತು ಸಾಹಿತ್ಯ ಸೃಷ್ಟಿಯಾಗುತ್ತಿದ್ದರೂ ಭಾಷೆಗೆ ಅದರ ಅಭಿವ್ಯಕ್ತಿಗೆ ಮಿತಿಯಿದೆ. ಬದುಕು ಎಲ್ಲಾ ಸಾಹಿತ್ಯವನ್ನು ಬೆಳೆಯುವಂತಹುದ್ದು....' ಎನ್ನುತ್ತಾರೆ. ಕಥೆಗೆ ಪ್ರೇರಣೆಯನ್ನು ಮನೆಯ ಪರಿಸರದೊಂದಿಗೆ ಸಮೀಕರಿಸುತ್ತಾ '......ನನ್ನ ತಂದೆ ತಾಯಿಗಳಿಗೆ ಕೊನೆಯ ಮಗನಾಗಿ ಹುಟ್ಟಿದ ಕ್ಷಣದಿಂದ ಅಮ್ಮನ ಮೊಲೆಯ ಹಾಲು ಕುಡಿಯುತ್ತಲೇ ನನ್ನೂರನ್ನು ಕಣ್ಣಲ್ಲಿ ತುಂಬಿ ಕೊಂಡಿದ್ದೇನೆ. ಇಲ್ಲಿಯ ಎಲ್ಲ ಜೀವಂತ ಬದುಕೇ ನನ್ನ ಕಥೆಗಳು"[30] ಎಂದು ಹೇಳುತ್ತಾರೆ. ತಮ್ಮ ಬದುಕೇ ಬರಹವಾಗಿದ್ದು ಬದುಕಿನೊಂದಿಗೆ ಬರಹವೂ ಸಹ ಭಾವನಾತ್ಮಕ ಸಂಬಂಧ ಹೊಂದಿದೆ ಎಂದು ವಿವರಿಸುತ್ತಾರೆ.

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಮನುಷ್ಯ ಸಂಬಂಧಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

ಅ) ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಬಂಧಗಳು.

ಆ) ಕೌಟುಂಬಿಕ ಹಾಗೂ ವೈವಾಹಿಕ ಸಂಬಂಧಗಳು.

ಇ) ಲೈಂಗಿಕ ಸಂಬಂಧಗಳು.

**ಅ) ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಬಂಧಗಳು**

ಆರ್ಥಿಕ ಅಸಮಾನತೆಯಿಂದ ನಿರ್ಗತಿಕರಾದವರು, ಜಾತಿಯಿಂದ ಕೆಳಸ್ತರದವರು, ಕಡಿಮೆ ಆಸ್ತಿವಂತರು ಅನಿವಾರ್ಯವಾಗಿ ಶ್ರೀಮಂತರ ಶೋಷಣೆಗೆ ತುತ್ತಾಗಬೇಕಾಗುತ್ತದೆ. ಅನ್ನಕ್ಕಾಗಿ ಬದುಕಿಗಾಗಿ ಅವರನ್ನು ಆಶ್ರಯಿಸಬೇಕಾಗುತ್ತದೆ. ಇಂಥ ಸಂದಿಗ್ಧ ಪ್ರಸಂಗದಲ್ಲಿ ಉಳ್ಳವರು ಬಡವರೊಡನೆ ಹೊಂದಿರುವ ಸಂಬಂಧ ಕೆಲವೊಮ್ಮೆ ಪ್ರೀತಿಯಿಂದ ಕೂಡಿದ್ದರೆ, ಕೆಲವೊಮ್ಮೆ ತೀರಾ ಅಮಾನವೀಯವಾಗಿ ಕಂಡು ಬರುತ್ತದೆ.

'ತಮ್ಮಂಥದ ಕೇಡು' ಕಥೆಯಲ್ಲಿ ಜಮೀನ್ದಾರ ಶಾಂತಗೌಡ ಮತ್ತು ಜೀತದಾಳು ದುರುಗನ ನಡುವಿನ ಸಂಬಂಧವು ಮಾನವೀಯ ನೆಲೆಯಲ್ಲಿಯೇ ನಿಂತಿದೆ. ಪರಸ್ಪರ ಕಕ್ಕುಲತೆಯಿಂದ ಕೂಡಿದೆ. ಜಾತಿ-ಮತ, ಮೇಲು-ಕೀಳು, ಬೇಧ-ಭಾವ ಎಲ್ಲವನ್ನು ಮೀರಿದ ಸ್ನೇಹ ಸಂಬಂಧವಾಗಿದೆ. ದುರಗ ತನ್ನ ಮಗ ಚೆನ್ನನ ಮನೆಯಲ್ಲಿದ್ದರೂ ಸಹ ಗೌಡನ ಸ್ನೇಹ ಗಾಢವಾಗಿ ಸೆಳೆಯುತ್ತಿತ್ತು. ಇತ್ತ ದುರುಗ ಇಲ್ಲದ್ದಕ್ಕೆ ಶಾಂತಗೌಡನಿಗೆ ಹುಚ್ಚು ಹಿಡಿದಂತಾಯಿತು. ಗಳಿಗೆಗೊಮ್ಮೆ 'ದುರುಗ' ಅಂದರೆ 'ಯಪೊ' ಅಂತ ಅವರಿಬ್ಬರ ನಡುವೆ ಮಾತ ನಡೆದರೇನೇ ತಿಂದ ಕೂಳು ಅರುಗುವುದು ಅಂತ ತಿಳಿದು ಕೊಂಡಿದ್ದರು.

"ಚೆನ್ನಮಲ್ಲಯ್ಯ ನಾ ಊರಿಗೆ ಹೋಗ್ತಿನಿ ನೀನು ತಣ್ಣಗಿರು ನನ್ಗ ಆ ಊರು ಆ ತಂಗಮ್ಮನ ನೀರು ಶಾಂತಗೌಡನ ಬಿಟ್ಟರಾಕ ನನಗೆ ಒಲ್ಲೆ ಅನಿಸ್ತದೆ"[೧೦] ಅಂತ ಅಂದು ಮರುದಿನವೇ ಓಡಿ ಬಂದು ಬಿಟ್ಟಿದ್ದೇ ರಕ್ತ ಸಂಬಂಧಕ್ಕಿಂತಲೂ ಧಣಿಯೊಡನೆ ಇರುವ ಬಾಂಧವ್ಯದ ಸೆಳೆತ ಹೆಚ್ಚು ಎಂಬುದು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. "ದುರುಗಾ ನೀನು ಮತ್ತಗಾದಿ" ಎಂದು ಗೌಡ ಕೇಳುವ ಮಾತಿನಲ್ಲಿ ಮಮತೆ, ವಾತ್ಸಲ್ಯ, ಭಾವವಿದೆ. ಆಳನ್ನು ಮಗನಂತೆ ಕಾಣುವ ಮಾನವೀಯತೆಯ ಗುಣವಿದೆ. ದುರುಗನ ಸ್ಥಿತಿಯನ್ನು ಕಂಡು ಅನುಕಂಪ ವ್ಯಕ್ತಪಡಿಸುವ ಗೌಡನ ಸಂವೇದನಾಶೀಲ ಮನಸ್ಸು ಮರುಗುತ್ತದೆ.

ದುರುಗನೂ ಸಹ ಅಷ್ಟೇ ವಿಧೇಯತೆಯಿಂದ "ಯಪ್ಪಾ ನನ್ಗ ನಿನಗೆ ಬುಡದ ನಂಟು ನೀನಿದ್ದಲ್ಲಿ ನಾನು, ನಾನಿದ್ದಲ್ಲಿ ನೀನು, ನಿನ್ಗ ನನ್ಗ ಬೇಧಯಿಲ್ಲ ಜಾತಿಯಿಲ್ಲ ಹಂಗ ನಡುಕೊಂಡು ಬಂದಿವೆ"[೧೧]

ಎಂಬ ಮಾತು ಅವರ ಅವಿನಾಭಾವ ಸಂಬಂಧವನ್ನು ತಿಳಿಸುತ್ತದೆ. ಶಾಂತಗೌಡ ದುರಗನನ್ನು ವಿಧವಿಧವಾದ ರೀತಿಯಲ್ಲಿ ಶೋಷಿಸಿದರೂ ಸಹ ಸಾವಿನಲ್ಲಿಯೂ ಇಬ್ಬರೂ ಒಂದಾಗುತ್ತಾರೆ.

**'ಒಡಲು ಗೊಂಡವರು'** ಕಥೆಯಲ್ಲಿ ಪದವೀಧರನಾದ ಹರಿಶ್ಚಂದ್ರ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡಿದ ಗಣಿಗಾರಿಕೆಯಿಂದ ಪರಿಸರ ನಾಶವಾಗುತ್ತದೆಂದು ನಿರಂತರ ಹೋರಾಟ ನಡೆಸಿದರೂ ಫಲಕಾಣಲಿಲ್ಲ. ಯಾರ ವಿರುದ್ಧ ಹೋರಾಟ ನೆಡೆಸಿದ್ದನೋ, ಅವರ ಕೈಗೊಂಬೆಯಾಗಿ ಬದುಕಬೇಕಾದ ಪ್ರಸಂಗ ಒದಗಿಬರುವುದು ವಿಪರ್ಯಾಸ. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಹತಾಶನಾಗಿ ಸೋಲೊಪ್ಪಿಕೊಳ್ಳುತ್ತಾನೆ.

**"ಹೊತ್ತು ಮೂಡುವ ಸಮಯ"** ಕಥೆಯಲ್ಲಿ ದೊಡ್ಡನಗೌಡ ಅತ್ಯಂತ ಕ್ರೂರಿಯಾಗಿ ಕಾಣುತ್ತಾನೆ. ತಾನು ಏನು ಮಾಡಿದರೂ ಸರಿ, ಆದರೆ ಬೇರೆಯವರು ಅದನ್ನು ಮಾಡಿದರೆ ಕೆರಳಿ ಕೆಂಡವಾಗುತ್ತಾನೆ. ತನ್ನ ಹೆಂಡತಿಯ ಜೊತೆ ಸಂಬಂಧ ಬೆಳೆಸಲು ಯತ್ನಿಸಿದ ಲಿಂಗನನ್ನು ಮುಗಿಸುತ್ತಾನೆ. ಒಕ್ಕಲುತನದ ಬೆನ್ನಲುಬಾಗಿದ್ದ 'ಸೂರ್ಯನೆಂಬ ಎತ್ತನ್ನೇ ಸುಟ್ಟು ಹಾಕುವಷ್ಟು ಕಟುಕನಾಗಿದ್ದಾನೆ. ಎತ್ತನ್ನೇ ಸುಡುವಷ್ಟರ ಮಟ್ಟಿಗೆ ಕ್ರೂರಿಯಾದ ವ್ಯಕ್ತಿ ಇನ್ನೂ ಮನುಷ್ಯರ ವಿಷಯದಲ್ಲಿ ಆತನ ವರ್ತನೆ ಊಹಿಸಲಾರರು.'

**ಆ) ಕೌಟುಂಬಿಕ ಹಾಗೂ ವೈವಾಹಿಕ ಸಂಬಂಧಗಳು :**

ಕುಟುಂಬ ಎಂಬುದು ಸಮಾಜದ ಒಂದು ಚಿಕ್ಕ ಘಟಕ, ಕುಟುಂಬದಲ್ಲಿ ಸಂಬಂಧಗಳು ಬಲೆಯಂತೆ ಹೆಣೆದುಕೊಂಡಿರುತ್ತವೆ. ಕುಟುಂಬದಲ್ಲಿ ಯಾರೂ ಅಪರಿಚಿತರಲ್ಲ. ಒಬ್ಬರಿಗೊಬ್ಬರು ಪರಸ್ಪರ ಬಾಂಧವ್ಯ, ಸಹಕಾರ ಮನೋಭಾವದಿಂದಲೇ ಜೀವಿಸುತ್ತಿರುತ್ತಾರೆ. ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಕೌಟುಂಬಿಕ ವ್ಯವಸ್ಥೆಯೇ ಪ್ರಧಾನವಾಗಿ ಬರುತ್ತದೆ.

ಅದರಲ್ಲೂ ಕೆಳವರ್ಗದ ಕೌಟುಂಬಿಕ ಚಿತ್ರಣದ ಯಥಾವತ್ತಾದ ನಿರೂಪಣೆಯನ್ನು ನೈಜವಾಗಿ ದಾಖಲಿಸುತ್ತಾರೆ. ಕುಟುಂಬ, ದಾಂಪತ್ಯ ಬದುಕಿನ ಸರಸ ವಿರಸಗಳನ್ನು, ನೋವು ನಲಿವುಗಳನ್ನು ಹತಾಶೆ ಭರವಸೆಗಳನ್ನು ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸುತ್ತಾರೆ. ತ್ಯಾಗ, ಸಹನೆ, ದುರಾಸೆ, ಸಣ್ಣತನ, ಈರ್ಷೆಗಳೂ ಇದರಲ್ಲಿ ಸೇರಿಕೊಂಡಿವೆ.

**"ಮನ್ನಿಸಿ ಮೂಕಾದ ಮೇಲೆ"** ಕಥೆಯಲ್ಲಿ ಉದ್ಯೋಗ ಸಿಕ್ಕತಕ್ಷಣ ಮಲ್ಲಯ್ಯ ನಾಗಲಕ್ಷ್ಮಿಯನ್ನು ಮದುವೆಯಾಗಿ ಮಾವನ ಮನೆಯಲ್ಲೇ ವಾಸಿಸುತ್ತಾ ತನ್ನನ್ನು ಸಾಕಿ, ಸಲಹಿದ ತಾಯಿಯನ್ನೇ ಮರೆಯುತ್ತಾನೆ. ಮಲ್ಲಯ್ಯನ ಭವಿಷ್ಯ ರೂಪಿಸಲು ದೊಡ್ಡಮ್ಮ ಪಟ್ಟಶ್ರಮ ಹೇಳತೀರದು. "ಆ ದಿನದಾಗ ದೊಡ್ಡವ್ವನನ ಸಲುವಾಗಿ ಜೀವವೇ ಒತ್ತಿಟ್ಟಂತೆ ದುಡಿದು ಹಣ್ಣಾದಳು' ಎಂದು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾನೆ. ಆತನ ಓದಿಗಾಗಿ ಎರಡು ಕೂರಿಗೆ ಹೊಲವನ್ನು ಒತ್ತೆಇಟ್ಟಿದ್ದಳು. ಬೆಟ್ಟದಷ್ಟು ಆಸೆ ಇಟ್ಟುಕೊಂಡಿದ್ದಳು."

ಆದರೆ ತಾನು ಹೆಂಡತಿ, ಕೆಲಸ ಸಿಕ್ಕ ನಂತರ ಅವರಿಂದ ದೂರವಾಗಿದ್ದರ ಬಗ್ಗೆ ಪಶ್ಚತ್ತಾಪ ಪಡುತ್ತಾನೆ. ಕಳಚಿಹೋದ ಕರುಳುಬಳ್ಳಿಯ ಸಂಬಂಧಕ್ಕಾಗಿ ಪುನಃ ಹಂಬಲಿಸುವುದರ ಮೂಲಕ ಮರಳಿಗೂಡು ಸೇರುವ ಆಶಯ ವ್ಯಕ್ತವಾಗಿದೆ. 'ಮನುಷ್ಯ ಸಂಬಂಧವನ್ನು ಬಿಟ್ಟರೂ, ಸಂಬಂಧಗಳು ಮನುಷ್ಯನನ್ನು ಬಿಡಲಾರವು' ಎಂಬುದು ಸ್ಪಷ್ಟವಾಗುತ್ತದೆ.

**"ಹೊತ್ತ ಮೂಡುವ ಸಮಯ"** ಕಥೆಯಲ್ಲಿ ವೈವಾಹಿಕ ಸಂಬಂಧಗಳಲ್ಲಿನ ಬಿರುಕು ಸ್ಪಷ್ಟವಾಗಿ ಕಂಡು ಬರುತ್ತದೆ. ದೊಡ್ಡನಗೌಡ ಮೂವರು ಹೆಂಡಿರ ಜೊತೆ ಸಂಸಾರ ಮಾಡಲು ವಿಫಲವಾಗಿ ಇಬ್ಬರ ಹೆಂಡಿರ ಸಾವಿಗೆ ತಾನೇ ಕಾರಣನಾಗುತ್ತಾನೆ. 'ದೊಡ್ಡನಗೌಡಗೆ ನೀವು ಮೂವರು ಹೆಂಡ್ರಾಗಿ ಬಂದ್ರೂ ದೇವ್ರು ಕಣ್ಣು ತೆರಿಲಿಲ್ಲ! ಎಂಬುದು ಗೌಡ ಅಕ್ಕಮ್ಮಳ ಸತ್ವಹೀನ ದಾಂಪತ್ಯವನ್ನು ತಿಳಿಸುತ್ತದೆ. ಸ್ವತಃ ದೊಡ್ಡನಗೌಡನ ಜೊತೆಗಿನ ಸಂಬಂಧದ ಕುರಿತು ಆತನ ಹೆಂಡತಿಗೆ ಜಿಗುಪ್ಸೆ ಮೂಡಿಸಿತ್ತು. ಮನುಷ್ಯತ್ವದ ಗಂಧಗಾಳಿ ಗೊತ್ತಿಲ್ಲದ ಮೃಗಕ್ಕೆ ಸಮಾನನಾದ ಗೌಡನೊಡನೆ ಸಂಸಾರ ದುರ್ಭರವಾಗಿ ಪರಿಣಮಿಸುತ್ತದೆ.

**'ಒತ್ತೆ'** ಕಥೆಯಲ್ಲಿ ಅನೈತಿಕಯಿಂದ ಕೂಡಿದ ಸಂಬಂಧವೂ ಸಹ ಅತ್ಯಂತ ಪರಿಶುದ್ಧ ಪ್ರೀತಿಯಾಗಿ ಕಾಣಿಸುತ್ತದೆ. ರಾಚಪ್ಪ ತನ್ನ ವೈವಾಹಿಕ ಬದುಕಿನಲ್ಲಿ ಕಳೆದುಕೊಂಡ ಸುಖ ಸಂತೋಷವನ್ನು ಮಾದರ ಜಾತಿಯ ದೇವಕಿಯ ಸಾಂಗತ್ಯದಲ್ಲಿ ಪಡೆಯುತ್ತಾನೆ. ಅವರ ಪ್ರೀತಿಯು ಅಧಿಕೃತ ದಾಂಪತ್ಯವನ್ನು ಮೀರಿಸುವಷ್ಟು ಸಾಮರಸ್ಯದಿಂದ ಕೂಡಿರುತ್ತದೆ. ಬೇಂದ್ರೆಯವರ ಕಾವ್ಯ 'ನಾನು ಬಡವಿ ಆತ ಬಡವ, ಒಲವೇ ನಮ್ಮ ಬದುಕು'.... ಎಂಬಂತೆ ದೇವಕಿ ರಾಚಪ್ಪರ ಸಂಬಂಧದಲ್ಲಿ ಅಕ್ಷರಶಃ ನಿಜವಾಗಿದೆ ಅವರಿಬ್ಬರ ಅನುರೂಪ ದಾಂಪತ್ಯದ ವಿವರಣೆ ಹೀಗಿದೆ.

ಒಂದರ್ಥದಲ್ಲಿ ದೇವಕಿಗೆ ನಿಜವಾದ ಗಂಡ ರಾಚಪ್ಪನೇ, ಹಾಗೆಯೇ ರಾಚಪ್ಪನಿಗೆ ದೇವಕಿ ನಿಜವಾದ ಹೆಂಡತಿ ಅನ್ನಬೇಕು. ರಾಚಪ್ಪನಿಗೆ ಮದುವೆಯಾಗಿ ಆಗಲೇ ಆರೇಳು ವರ್ಷಗಳಾಗಿದ್ದರೂ ಹೆಂಡತಿಯ ಮೇಲೆ ಪ್ರೀತಿ ಹುಟ್ಟಲೇ ಇಲ್ಲ! ಮನಃಶಾಂತಿ ಕದಡುವ ನೆಮ್ಮದಿ ತರದ ಹೆಂಡತಿ ಜೊತೆ ಬಾಳುವುದೆಂದರೇ ನರಕ ಸದೃಶ್ಯವಾಗಿರಬೇಕು. ದೇವಕಿಯ ಮಡಿಲಲ್ಲಿ ಸ್ವರ್ಗ ಕಂಡ ಆಕೆ ರಾಚಪ್ಪನಿಗಾಗಿ ತನು, ಮನ, ಧನ, ಸರ್ವಸ್ವವನ್ನೇ ಧಾರೆಯೆರೆದಳು. ಆತನ ಬಯಕೆ ಈಡೇರಿಕೆಗಾಗಿ ತನ್ನ ತಾಳಿಯನ್ನೇ ಒತ್ತೆ ಇಟ್ಟು ಆದರ್ಶವನ್ನು ಮೆರೆದಳು. ಇದು ಇಡೀ ಕಥೆಗಳಲ್ಲಿಯೇ ಒಂದು ವಿಭಿನ್ನ ಸಂಬಂಧ ಎನಿಸುತ್ತದೆ.

ಸಾಮಾಜಿಕ ನಡಾವಳಿಕೆಯ ಚೌಕಟ್ಟನ್ನು ಮೀರುವ ತವಕ ಪಡೆದ ಈ ಸಂಬಂಧಗಳಲ್ಲಿ ಮನುಷ್ಯನ ಸಾಮಾಜಿಕ ಮಾನಸಿಕ ನೆಲೆಯ ವೈರುಧ್ಯಗಳನ್ನು ಹುಡುಕುವ ಆಸಕ್ತಿ ಇರುವಂತಿದೆ. ಇಲ್ಲಿ

ಸ್ವಲ್ಪ ಅತಿಯಾದ ಭಾವುಕವೆನ್ನುವ ತಿರುವನ್ನು ಪಡೆದುಕೊಳ್ಳುವುದರಿಂದ ರಾಚಪ್ಪನ ವಿವಾಹದ ಆಚೆಗಿನ ಸಂಬಂಧಕ್ಕೆ ಕೇವಲ ಮಾನವೀಯ ನೆಲೆಯನ್ನು ಮಾತ್ರ ಒದಗಿಸಲು ಕಥೆಗಾರರು ಮನಸ್ಸು ಮಾಡಿದಂತಿದೆ.

**'ಮಣ್ಣು ಸೇರಿತು ಬೀಜ'** ಕಥೆಯಲ್ಲಿ ಅಣ್ಣ ತಂಗಿಯ ಸಂಬಂಧದ ಚಿತ್ರಣ ಕಂಡುಬಂದರೂ ಅವರ ಸಣ್ಣತನ, ಅಸೂಯೆ, ಅನುಮಾನ, ಜಗ್ಗುತನಗಳನ್ನೆಲ್ಲ ಕಾಣಿಸುವ ವಾಸ್ತವಿಕತೆಯಾಗಿದೆ. ಜಂಬಣ್ಣನ ತಂಗಿಯಾದ ನಾಗಮ್ಮನ ಬದುಕು ಛಿದ್ರ ಛಿದ್ರವಾದರೂ ಅದನ್ನು ಆತ ಸರಿಪಡಿಸಿ ಹೊಸ ಬದುಕು ಕಟ್ಟಿಕೊಟ್ಟ. ಸ್ವತಃ ನಾಗಮ್ಮನೆ ಹೇಳುವಂತೆ "ನಾಯಿ ಮುಟ್ಟಿದ ಗಡಿಗಿನ್ನ ಯಾರು ಕೇಳ್ತಾರ? ಅತ್ತ ಕಟ್ಟಿಗಂಡವನೂ ಇಲ್ಲ. ಇತ್ತ ಕಲ್ತವನೂ ಇಲ್ಲ. ಬೀದಿನಾಯಂಗ ತಿರುಗಿ ತಿರುಗಿ ತವರು ಮನಿಗೆ ಬಂದೆ. ಅಣ್ಣ ಜಂಬಣ್ಣ ಕರಕಂಡ ಎಂಗ್ ಬಿಡ್ತಾದ ಕರುಳು ಕಕ್ಕುಲಾತಿ!"[19] ಎಂದು ಅಣ್ಣನ ಉದಾರತೆಯನ್ನು ವಾತ್ಸಲ್ಯವನ್ನು ನೆನೆಯುತ್ತಾಳೆ.

**'ಕುಡಿ ಬಂದ ದೀಪಗಳು'** ಕಥೆಯಲ್ಲಿ ಮನುಷ್ಯನ ಏಕಾಂಗಿತನ ಒಂಟಿತನ ಅಸಹಾಯಕತೆಯ ನಡುವೆಯೇ ಭರವಸೆಯ ಬದುಕು ರೂಪುಗೊಳ್ಳುತ್ತದೆ. ಹಳೆಯ ಪಳೆಯುಳಿಕೆಯಂತಹ ಕಹಿ ನೆನಪುಗಳ ನಡುವೆಯೇ ಮನುಷ್ಯ ಆಶಾವಾದಿಯಾಗಿ ಹೊಸ ಬದುಕನ್ನು ಅರಸುತ್ತಾನೆ. ಮನುಷ್ಯ ಸಂವೇದನೆಗಳೇ ಇಲ್ಲದ ಭಾವನೆಗಳ ಸ್ಪರ್ಶವೇ ಇಲ್ಲದ ಮತಿ ಭ್ರಾಂತಿ ಹೊಂದಿದ ದೇವಿಗೆ ಕಥಾನಾಯಕ ಗೌರಿಶಂಕರ ತೋರುವ ಪ್ರೀತಿ ಆಕೆಯ ಕಾಮವಿಕಾರಕ್ಕೆ ತಿರುಗಿ ಬದುಕನ್ನೇ ಬದಲಿಸುತ್ತದೆ.

**'ಏ ದಿಲ್ ಮಾಂಗೇ ಮೋರ್'** ಕಥೆಯು ಕ್ರೀಡಾಲೋಕದೊಡನೆ ಗ್ರಾಮದ ಚಿತ್ರಣವನ್ನು ಬಿಚ್ಚಿಡುತ್ತದೆ. ಅಂತರ್ಜಾತಿ ವಿವಾಹ ಪ್ರಸಂಗ ಜೂಜಾಟದ ಅಬ್ಬರದ ನಡುವೆಯೇ ಮನುಷ್ಯ ಸಂಬಂಧವು ಬೆಸೆದುಕೊಳ್ಳುತ್ತದೆ. ಹುಸೇನವ್ವ ಅನಾಥ ಬಾಲಕ ಚಿದಾನಂದನನ್ನು ಸಾಕಿ ಬೆಳೆಸಿದಳು ಹೋಟೆಲ್‌ನಲ್ಲಿ ಕೆಲಸ ಮಾಡುತ್ತಿದ್ದರೂ ಸಹ ಹುಸೇನವ್ವ ಪೋಲಿಸ್ ಠಾಣೆ ಸೇರಿದ ಸಂದಿಗ್ಧ ಪರಿಸ್ಥಿತಿಯಲ್ಲಿ ಆಕೆಯನ್ನು ಬಿಡಿಸಲು ಹರಸಾಹಸ ಮಾಡಿದ. ಆಕೆಯಿಂದ ಗ್ರಾಮದ ಅನೇಕರು ಉಪಕೃತರಾದರು. ಕಷ್ಟಕಾಲದಲ್ಲಿ ಆಕೆಯ ನೆರವಿಗೆ ಚಿದಾನಂದನೇ ಬಂದ. ಮಗನಂತೆ ಕರ್ತವ್ಯ ನಿರ್ವಹಿಸಿ ಋಣ ತೀರಿಸಿದ ರಕ್ತ ಸಂಬಂಧಕ್ಕೂ ಮಿಗಿಲಾದ ತಾಯಿ–ಮಗನ ಸಂಬಂಧ ಅವರಿಬ್ಬರ ನಡುವೆ ಇತ್ತು 'ನೀ ನನಗಾಸರೆ, ನಾ ನಿನಗಾಸರೆ' ಎಂಬಂತೆ ಚಿದಾನಂದನ ಹೃದಯವಂತಿಕೆಗೆ ಮೆಚ್ಚಿದ ಹುಸೇನವ್ವ ಪ್ರತಿಯಾಗಿ ಮಾಡುವ ಸಹಾಯ ಗಮನಾರ್ಹವಾದುದ್ದು. "ಮಗಾ ಇನ್ನು ಮೇಲೆ ನೀನು ಹೋಟೆಲದಾಗ ಕೆಲ್ಸ ಮಾಡಬ್ಯಾಡ. ಸಾಲೆ ಸುರುವಾಗ್ಯಾವಂತ ನೀನು ಸಾಲಿಗೆ ಸೇರಿಕೋ ಆ ಹಣವನ್ನು ನೀನು ನಿನ್ನ ಹೆಸರಿಗೆ ಬ್ಯಾಂಕಿನಲ್ಲಿಟ್ಟು ಓದು. ನಿನ್ನ ಶಾಣ್ಯಾತನ ಓದಿನ್ಯಾಗ ತೋರಿಸು. ಚೆಂದಾಗಿ ಓದು ಮುಂದ ನಿನ್ನ ಓದಿಸುವ ಜವಾಬ್ದಾರಿ ನನ್ನ ಇರಲಿ"[20] ಎಂದಳು.

ಈ ಅಪರೂಪದ ಸಂಬಂಧ ಮಾತ್ರ ಹೃದಯ ಸ್ಪರ್ಶಿಯಾದದ್ದು. ಮನುಷ್ಯನ ಅಂತಃಕರಣದ ಜಾಗೃತಿಗೆ ಸಾಕ್ಷಿಯಾಗಿ ನಿಲ್ಲುತ್ತದೆ. ಆಸೆ, ದುರಾಸೆ, ಸಣ್ಣತನಗಳ ನಡುವೆಯೂ ಮನುಷ್ಯ ಎಲ್ಲೋ ಒಂದು ಕಡೆ ಒಳ್ಳೆಯದಕ್ಕಾಗಿ ಹಂಬಲಿಸುತ್ತಾಳೆ ಎಂಬುದು ಈ ಕಥೆಯ ಆಶಯ ಅಭಿವ್ಯಕ್ತಿಗೊಳಿಸುತ್ತದೆ.

**ಇ) ಲೈಂಗಿಕ ಸಂಬಂಧಗಳು**

ಲೈಂಗಿಕ ಸಂಬಂಧಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕೇವಲ ದೈಹಿಕ, ಮಾನಸಿಕ ನೆಲೆಯಲ್ಲಿ ಮಾತ್ರ ಸಾಮಾಜಿಕ ಪಾತಳಿಯನ್ನು ದಾಟುವುದು ಒಂದು ಸಂಕೇತ ಮಾತ್ರವಲ್ಲ, ಆ ವ್ಯವಸ್ಥೆ ರೂಪಿಸಿರುವ ಅಮಾನವೀಯ ಒತ್ತಡಗಳ ನಡುವೆ ಸಂಧಾನಕ್ಕೆ ಇರುವ ಒಂದು ಮಾಧ್ಯಮವೂ ಆಗಿರುವ ಸಾಧ್ಯತೆಗಳಿವೆ. ಯಾವುದೇ ರಮ್ಯತೆಯಾಗಲೀ ಆವೇಶದಲ್ಲಿ ತೊಯ್ದ ಮಾತುಗಳಾಗಲೀ ಇಲ್ಲವೆ ಮನುಷ್ಯ ಸಂಬಂಧಗಳ ಸಂಕೀರ್ಣತೆಯನ್ನು ಭೀಕರವೆನಿಸುವ ವಾಸ್ತವ ನೆಲೆಯಲ್ಲಿ ಪರಿಭಾವಿಸುವ ಪರಿಪಾಠ ನುಗಡೋಣಿಯವರ ಕಥೆಗಳಲ್ಲಿವೆ.

**'ಹೊತ್ತು ಮೂಡುವ ಸಮಯ'** ಕಥೆಯು ಸಾಮಾಜಿಕ ಶೋಷಣೆಯನ್ನು ಲೈಂಗಿಕ ಸಂಬಂಧದ ಮೂಲಕ ಪೊಳ್ಳುಗೊಳಿಸುವ ಒಂದು ಸಿದ್ಧಮಾದರಿಯನ್ನು ಇದು ಅವಲಂಬಿಸಿದೆ. ಹಾಗಾಗಿ ಕಥೆಯು ಗಟ್ಟಿಯಾಗಿ ಕಂಡುಕೊಳ್ಳದೇ ಸಡಿಲಿಕೆ ಕಂಡುಬರುತ್ತದೆ. ಕ್ರೂರ ಮೃಗೀಯ ಸ್ವಭಾವದ ಜಮೀನ್ದಾರನ ವರ್ತನೆ ನಿರ್ವೀಯ ತನದಿಂದ ಬೇಸತ್ತ ಹೆಂಡತಿ ಅಕ್ಕಮ್ಮ ಕೆಳಜಾತಿಯ ಪರಪುರುಷನೊಡನೆ ಲೈಂಗಿಕ ಸಂಬಂಧವಿಟ್ಟುಕೊಳ್ಳುವ ಮಾದರಿ ಇದು.

ನೈತಿಕ ದೃಷ್ಟಿಯಿಂದ ಮನುಷ್ಯ ಸಂಬಂಧಗಳು ಸತ್ಯಾಸತ್ಯತೆಯನ್ನು ಅರ್ಥ ಮಾಡಿಕೊಳ್ಳುವುದು ಅಸಾಧ್ಯ ಎಂಬ ಸತ್ಯ **'ಒತ್ತೆ'** ಕಥೆಯಿಂದ ಕಂಡು ಬರುತ್ತದೆ. ರಾಚಪ್ಪ ದೇವಕಿಯರ ಸಂಬಂಧ ಸಮಾಜದ ದೃಷ್ಟಿಯಿಂದ ಅನೈತಿಕವೆನಿಸದರೂ ಸಹ ಮನುಷ್ಯನ ಸಹಜ ಮೂಲ ಪ್ರವೃತ್ತಿ ಬಯಕೆಗಳ ಪೂರೈಕೆಯ ಕಾರಣದಿಂದ ಅವರ ಸಂಬಂಧವು ಕಾಮದ ಪರಿಧಿಯನ್ನು ಮೀರಿ ಬೆಳೆಯುತ್ತದೆ. ಅಲ್ಲಿ ಕಾಮದ ಜೊತೆಗೆ ಭಾವನೆಗಳಿಗೂ ಬೆಲೆ ಸಿಗುತ್ತದೆ. ಲೈಂಗಿಕ ಸಂಬಂಧದಿಂದ ಕೇವಲ ಕ್ಷಣಿಕ ಸುಖ ಸಿಗುತ್ತದೆ. ಅಷ್ಟೇ ಅಲ್ಲ ಮನುಷ್ಯ ಸಂಬಂಧಗಳು ಗಟ್ಟಿಗೊಳ್ಳುವ ಸನ್ನಿವೇಶ ನಿರ್ಮಾಣಗೊಳ್ಳುತ್ತದೆ. ಪರಸ್ಪರ ಪ್ರೀತಿ, ಅನುರಾಗ, ಅಕ್ಕರೆ ಕಳಕಳಿ, ತ್ಯಾಗ ಮನೋಭಾವದಿಂದ ಕಾಮವನ್ನೇ ಮೀರುತ್ತದೆ. ಭಾವುಕತೆಯ ಏರಿಳಿತದಲ್ಲಿ ದಾಂಪತ್ಯದ ಹೊರತಾದ ಈ ಅಕ್ರಮ ಸಂಬಂಧ ಮಾನವೀಯ ಸಂವೇದನೆಯನ್ನು ಪಡೆದು ಅರ್ಥಪೂರ್ಣವೆನಿಸಿಬಿಡುತ್ತದೆ.

**'ಬಯಲು ಆಲಯದೆಡೆಗೆ'** ಕಥೆಯಲ್ಲಿ ಲೆಕ್ಕಾಚಾರದ ಸಾಂಕೇತಿಕ ನೆಲೆಯಲ್ಲಿ ಲೈಂಗಿಕ ಶಕ್ತಿಯ ವಿವೇಚನೆಯಿಂದ ಶಿವಯ್ಯನ ದಾಂಪತ್ಯ ಜೀವನ ಹದಿನೈದು ವರ್ಷಗಳ ಹಿಂದೆಯೇ ಮುರಿದು ಬಿದ್ದಿದೆ.

ಏಕಾಂಗಿಯಾಗಿ ಶ್ಯಾಮಪ್ಪನ ತೋಟದಲ್ಲಿ ಕೆಲಸಕ್ಕಿದ್ದ ಶಿವಯ್ಯನು ಶ್ರದ್ಧೆ ನಿಯತ್ತಿನಿಂದ ವಿಶ್ವಾಸಗಳಿಸಿದ್ದ. ಒಂದು ದಿನ ತೋಟದ ಬಾವಿಯಲ್ಲಿ ಸ್ನಾನ ಮಾಡುತ್ತಿದ್ದ ಹೆಣ್ಣನ್ನು ನೋಡಿದಾಗ ಆತನ ಮನಸ್ಸು ಕದಡಿ ಹೋಯಿತು. ಕಳೆದುಕೊಂಡ ದೇಹದ ಸ್ಪರ್ಶಸುಖಕ್ಕೆ ಆತನ ತನುಮನಗಳು ಹಾತೊರೆದಿದ್ದವು.

ಮನುಷ್ಯನು ಕಾಮದಬಯಕೆಯನ್ನು ಎಷ್ಟೇ ಅದುಮಿಟ್ಟರೂ ಅದು ಒಂದಲ್ಲ ಒಂದು ದಿನ ಸ್ಫೋಟಗೊಳ್ಳುತ್ತದೆ. ದೇಹವು ಬಯಕೆ ಈಡೇರಿಕೆಗೆ ಹಂಬಲಿಸುತ್ತದೆ. ಅದನ್ನು ತಡೆಯಲು ನಾವು ಪ್ರಯತ್ನಿಸುವುದು ವ್ಯರ್ಥ! ಎಂಬುದು ಈ ಕಥೆಯ ಸಾರ. ಈಗಲೇ ಹೋಗಿ ಹೆಂಡತಿಯನ್ನು ಅಪ್ಪಿಕೊಳ್ಳಲೆ! ಎಂದು ಶಿವಯ್ಯ ತವಕಿಸಿದ. ಪ್ರಕೃತಿಯಲ್ಲಿ ಒಂದಾಗಿ ಬೆಳೆಸಿಕೊಂಡು ಬಂದ ಶಕ್ತಿಯನ್ನು ಕಳೆದುಕೊಂಡ! ಸೋಲತೊಡಗಿದ! ಎಂದು ಭಾವನೆಗಳ ತೀವ್ರತೆಗೆ ಗುರಿಯಾಗಿ ಹೋಯ್ದಾಡುವ ಮನಸ್ಥಿತಿಯನ್ನು ಸಮರ್ಥವಾಗಿ ನಿರೂಪಿಸಲಾಗಿದೆ.

ಗಂಡು ಹೆಣ್ಣುಗಳ ನಡುವಿನ ಲೈಂಗಿಕ ಸಂಬಂಧದ ಭಿನ್ನ ನೆಲೆಗಳನ್ನು ಅಮರೇಶರ ಕಥೆಗಳು ಪುನಃ ಪುನಃ ಮನ ಮುಟ್ಟುತ್ತವೆ. ನೈಜವಾಗಿ ಸಾಚಾತನದಿಂದಲೇ ಪದರ ಪದರಾಗಿ ವಿಮರ್ಶಿಸಲು ಪ್ರಯತ್ನ ನಡೆಸುತ್ತವೆ. ಮುಖ್ಯ ಸಂಗತಿ ಎಂದರೆ ಗಂಡು ಹೆಣ್ಣಿನ ಸಂಬಂಧವನ್ನು ಕಥೆಗಾರರು ಸಮಾಜ ಗ್ರಹಿಸಿಕೊಂಡಿರುವ, ಒಪ್ಪಿಕೊಂಡಿರುವ ಅಥವಾ ಕನಿಷ್ಠ ಘೋಷಿಸಿಕೊಂಡಿರುವ ಚೌಕಟ್ಟುಗಳಿಂದ ಹೊರಗಿರಿಸಿ ಚರ್ಚಿಸುವ ಮತ್ತು ಆ ಮೂಲಕ ಲೈಂಗಿಕ ಸಂಬಂಧಗಳ ಸಾಮಾಜಿಕ ಅರ್ಥ ಶೋಧನೆಗೆ ಪ್ರಮಾಣಿಕ ಪ್ರಯತ್ನ ನಡೆಸಿದ್ದಾರೆ. ಇದಕ್ಕೆ ನೈತಿಕ ಸ್ಥೈರ್ಯ ಧೃಡತೆಯೂ ಬೇಕು. **"ದಾರಿ ಮೂಡಿಸುವ ಹೆಜ್ಜೆಗಳು"** (೧೯೯೧), **"ಹೊತ್ತು ಮೂಡುವ ಸಮಯ"** (೧೯೯೦) **"ಕಾಗೀಕೂಟ"**(೧೯೯೧) **"ಉತ್ತಮಣ"** (೧೯೯೪), ಇಂತಹ ಕಥೆಗಳಲ್ಲಿ ಎದೆಗಾರಿಕೆಯಿದೆ ಇಲ್ಲೆಲ್ಲಾ ಕಂಡು ಬರುವ ಕಾಮ ಸಂಬಂಧಿ ಚಟುವಟಿಕೆಗಳಲ್ಲಿ ಮಹಿಳೆಯರೇ ಮುಂಚೂಣಿಯಲ್ಲಿದ್ದಾರೆ[೨೨] ಎಂದು ಪುರುಷೋತ್ತಮ ಬಿಳಿಮತಿಯವರು ಹೇಳುತ್ತಾರೆ.

**'ಹೊತ್ತು ಮೂಡುವ ಸಮಯ'** ಕಥೆಯಲ್ಲಂತೂ ಗೌಡನ ಹೆಂಡತಿಯೇ ಗೌಡನನ್ನು ತಿರಸ್ಕರಿಸಿ ಮನೆಯ ಜೀತದಾಳು ಲಿಂಗನಿಗೆ ದೇಹವನ್ನು ಒಪ್ಪಿಸಲು ಸಿದ್ಧಳಾಗುತ್ತಾಳೆ. ಕಟ್ಟುಮಸ್ತಾದ ಆಳು ಭೀಮನಿಗೂ ಹಂಬಲಿಸುತ್ತಾಳೆ. ಕೊನೆಗೆ ಲಿಂಗನ ಮಗನ ಜೊತೆ ಲೈಂಗಿಕ ಸಂಪರ್ಕ ಸಾಧಿಸುವಲ್ಲಿ ಸಫಲಳಾಗುತ್ತಾಳೆ. ಗೌಡ ಹೆಣ್ಣುಗಳನ್ನು ಹೇಗೆ ಹಾಳು ಮಾಡುತ್ತಾ ಹೋಗಿದ್ದನೋ ಹಾಗೆಯೇ ಆತನ ಹೆಂಡತಿಯೂ ಸಮನಾಂತರವಾಗಿ ಲೈಂಗಿಕ ಸಂತೃಪ್ತಿಯನ್ನು ಅರಸುತ್ತಾಳೆ. ಆಕೆಯು ಕೆಳ ಜಾತಿಯವನನ್ನೇ ಹೊಂದುವುದು ವಿಶೇಷ ಕೆಲವು ಸಲ ಹೆಂಗಸರು ತಣ್ಣನೆಯ ಆಕ್ರಮಣಗಳಲ್ಲಿ ನಿರತರಾಗುತ್ತಾರೆ. ಇವರಿಗೆ ಹೋಲಿಸಿದರೆ

ಗಂಡಸರು ದುರ್ಬಲ ವ್ಯಕ್ತಿಗಳಾಗಿ ಕಂಡು ಬರುತ್ತಾರೆ. ಇದು ಕಾಮದ ಬಗ್ಗೆ ಪುರುಷ ದೃಷ್ಟಿಕೋನವಿದ್ದಂತೆ ಇರಬಹುದು. "ಊಳಿಗಮಾನ್ಯ ವ್ಯವಸ್ಥೆಯನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ದಾಟಬಲ್ಲ ಶಕ್ತಿಯನ್ನು ಹೊಂದಬಲ್ಲವರು ಮಹಿಳೆಯರೇ ಆಗಿರುತ್ತಾರೆ" ಎಂದು ಕೆ.ವಿ ನಾರಾಯಣರ ಮಾತು ನಿಜವಾದುದು.

**'ದಾರಿಮೂಡಿಸುವ ಹೆಜ್ಜೆಗಳು'** ಕಥೆಯಲ್ಲಿ ಹೆಣ್ಣು ಹೇಗೆ ಪುರುಷ ಪ್ರಧಾನ ಸಮಾಜದಲ್ಲಿ ಲೈಂಗಿಕ ಶೋಷಣೆ ಅನುಭವಿಸುತ್ತಾಳೆ ಎಂಬುದರ ಮನಮಿಡಿಯುವ ಚಿತ್ರಣವಿದೆ. ಮಠದ ಸ್ವಾಮೀಜಿಯು ಕಾಮೋನ್ಮಾದದಿಂದ ತಿಮ್ಮಕ್ಕನ ಮೇಲೆ ಅತ್ಯಾಚಾರ ಮಾಡುವುದು ವಿಕೃತವೆನಿಸುತ್ತವೆ. "ಸ್ವಾಮಿ ಒಂದೆರಡು ಸಲ ಬಂದು ಚಟ ಮುರುಕೊಂಡ, ತಿಮ್ಮಿ ನಿನ್ನ ಮೈಯಿ ಅಂದ್ರ ಸಕ್ರಿಕಣ್ಣಿ" ಎಂದು "ನನ್ನ ಮೈಯೆಂಬ ಮೈಯಿನ್ನ ನಾಯಿನೆಕ್ಕಿದಂಗ ನೆಕ್ಕುತ್ತಿದ್ದನವ್ವ ಚೇರಾಗ, ಹೊಲಸು ನಾಯಿ ಅಂತವನು" ಎಂದು ಆಕೆ ರೋಧಿಸುವ ಪರಿ ವಿಕೃತ ಕಾಮಕ್ಕೆ ಸಾಕ್ಷಿಯಾಗಿದೆ. ಪರಸ್ಪರ ಒಪ್ಪಿಗೆಯಿಂದ ಸಂಬಂಧ ಏರ್ಪಟ್ಟಾಗ ಅದು ಸರಿ. ಆದರೆ ತನಗೆ ಸುಖ ಪಡೆಯಲೋಸ್ಕರ ಬಲವಂತವಾಗಿ ಪೀಡಿಸುವುದು ಮೃಗೀಯ ವರ್ತನೆಯೇ ಸರಿ. ಇದರಿಂದ ನೊಂದ ಆಕೆ ಊರು ಬಿಟ್ಟು ಗೂಳಪ್ಪನನ್ನು ಮದುವೆಯಾದಳು. ನಂತರ ಹಿರೇಗೌಡನ ಪಾಲಾದಳು. ಹೀಗೆ ಹಲವು ರೀತಿಯ ಲೈಂಗಿಕ ಶೋಷಣೆಗೆ ಗುರಿಯಾದರೂ ತಿಮ್ಮಕ್ಕ ಮಾತ್ರ ತನ್ನದೇ ಆದ ಬದುಕನ್ನು ಕಟ್ಟಿಕೊಂಡಿದ್ದಳು.

ಫ್ಯೂಡಲ್ ವ್ಯವಸ್ಥೆಯಲ್ಲಿ ಉಳ್ಳವರ ದಾಹಕ್ಕೆ ಬಡವರು ಎಲ್ಲವನ್ನು ಕಳೆದುಕೊಂಡು ತಮ್ಮನ್ನ ಒತ್ತೆಯಾಗಿಟ್ಟುಕೊಂಡು ದುಡಿಯುತ್ತಾರೆ. ದೇವನೂರ **'ಮಾರಿಕೊಂಡವರು'** ಕಥೆಯಲ್ಲಿ ಸ್ಪಷ್ಟವಾಗಿ ಬಿಡುತ್ತದೆ. ಅದಕ್ಕ ಹೋಲಿಕೆಯಾಗುವಂತಹ ಪ್ರಸಂಗ ನುಗಡೋಣಿಯವರ **'ತಮಂಧದ ಕೇಡು'** ಕಥೆಯಲ್ಲಿ ಕಂಡುಬರುತ್ತದೆ. ತನ್ನನ್ನೇ ನಂಬಿದ ದುರುಗನನ್ನು ಶಾಂತಗೌಡ ಅವನ ಸರ್ವಸ್ವವನ್ನು ಕಿತ್ತುಕೊಂಡ ತುಂಬಾ ಪ್ರೀತಿಯಿಂದ ಬೆಳೆಸಿದ್ದ ಗಿಡಗಳನ್ನೇ ಕಡಿದು ಕೃಷಿ ಸಾಮಗ್ರಿಗಳನ್ನು ಮಾರಿಕೊಂಡ. ಆದ್ದರಿಂದ ಅಪಾರ ನೋವಾದರೂ ಸಹ ದುರುಗ ಅವನ್ನೆಲ್ಲ ಅವುಡುಗಟ್ಟಿ ಸಹಿಸದ. ಇದು ಬಲಿಷ್ಠರ ಹೃದಯ ಹೀನತೆ ಇಲ್ಲದವರ ಅಸಹಾಯಕತೆಯನ್ನು ಎತ್ತಿ ತೋರಿಸುತ್ತದೆ. ಗೌಡ ದುರುಗನ ಹೆಂಡತಿ ಚಂದವ್ವಳ ದೇಹವನ್ನು ಬಿಡದೇ ಬಳಸಿಕೊಂಡ. "ಆತನಿಗೆ ಸ್ವಂತ ಹೆಂಡತಿಗಿಂತ ದುರುಗನ ಹೆಂಡತಿಯೇ ಹಿತವೆನಿಸಿದಳು. ಶಾಂತಗೌಡ ಆಕೆಯ ಸಂಬಂಧ ಆಕೆ ಸಾಯುವ ತನಕ ನಡೆದಿತ್ತು" ಇದು ಅವರಿಬ್ಬರ ಲೈಂಗಿಕ ಸಂಬಂಧದ ಚಿತ್ರಣ ಶ್ರೀಮಂತರು ತಾವು ಏನು ಮಾಡಿದರೂ ಸರಿ! ನೈತಿಕ-ಅನೈತಿಕತೆ, ನ್ಯಾಯ-ಅನ್ಯಾಯ, ಜಾತಿ-ವಿಜಾತಿಯ ಪ್ರಶ್ನೆ ಉದ್ಭವಿಸಲಾರದು. ಆದರೆ ಪಾಪ ದುರುಗನಂತಹ ಮುಗ್ಧರು ಇಂತಹ ಸಂಬಂಧವನ್ನು ಕಣ್ಣಾರೆ ಕಂಡರೂ ಸಹ ನುಂಗಿಕೊಳ್ಳಬೇಕಾಗಿ ಬರುವುದು ವಿಪರ್ಯಾಸವೇ ಸರಿ.

ಆದರೆ ಚನ್ನನಿಗೆ ತನ್ನ ತಾಯಿಯ ಜೊತೆ ಗೌಡ ಅಕ್ರಮ ಸಂಬಂಧ ಹೊಂದಿರುವುದು ಗೊತ್ತಾದಾಗ ಆಘಾತವಾಯಿತು. ಶಾಂತಗೌಡನ ಹೆಂಡತಿ ಹಂಪಮ್ಮನಿಗೆ ಸಹಜವಾಗಿಯೇ ಚಂದವ್ವನ ಸಂಬಂಧದ ಬಗ್ಗೆ ಮತ್ಸರವಿತ್ತು. ಅದನ್ನು ಮಾಸ್ತರು ಸಮರ್ಥಿಸಿ ಸಮಸ್ಯೆ ಬಗೆಹರಿಸಿದ ರೀತಿ ತುಂಬಾ ಜಾಣ್ಮೆ ಸಮಯ ಸಾಧಕತೆಯಿಂದ ಕೂಡಿದೆ.

"ಶಾಂತಪ್ಪ ಒಳ್ಳೆ ಮನುಷ್ಯವ್ವ ಏನೋ ಕೆಟ್ಟಗಳಿಗೆ ಆತನ ಹಣೆ ಬರೆದಾಗ ಅದು ಬರದಾದ ಅನ್ನಬೇಕು. ಅದಕ ಚಂದವ್ವನ ಸಾವಾಸ ಮಾಡ್ಯಾನ ಆಳೋ ಗಂಡಿಗೆ ನೂರು ಹೆಣ್ಣುಗಳಂತ. ನೀನು ತಣ್ಣಗ ಈ ಮನ್ಯಾಗ ಇರಬೇಕು ಶಾಂತಪ್ಪ ಗಂಡಿಲ್ಲಂತ ಮತ್ತೊಂದು ಹೆಣ್ಣು ತಂದಿದ್ರ? ಮನ್ಯಾಗ ಕಣ್ಣೆಮರಿಗೆ ನೋಡ ಬೇಕಿತ್ತಲ್ಲ. ಬಂದ ಹೆಂಗಸು ಹೆಂಗಿರತ್ತಿತ್ತೋ ಏನೋ! ಮಗಳ ತಾಯಾಗಿದ್ದಿ. ಬೇಕಾದಷ್ಟು ಸಂಪತ್ತಾದ ನಿನಗೇನು ಅಂತ ವಯಸ್ಸಾಗ್ಯಾವ ಬಸ್ವ ಕಣ್ಣು ತೆರೆದ್ರ... ಒಂದು ಗಂಡು ಹುಟ್ಟಿದ್ರ ಎಲ್ಲ ಸರಿ ಹೋದೀತು ಅಂತ ತಿಳಿಸಿ ಹೇಳಿ ಸಮಾಧಾನ ಮಾಡಿದ. ಹಂಪಮ್ಮ ಅದೆಂಗೋ ನಿಶ್ಚಿಂತಳಾದಳು. ಶಾಂತಗೌಡುಗ ಅದೇ ಬೇಕಾಗಿತ್ತು. ಚಂದವ್ವ ನಲ್ಲಿಗೆ ಹೋಗಿ ಬರಾಕ ಇದ್ದ ಒಂದು ಅಳುಕೂ ಕಮ್ಮಿಯಾದಂಗಾಯ್ತು."[35] ಎಂದ ಅನೈತಿಕ ಸಂಬಂಧವನ್ನು ಸಮರ್ಥಿಸುತ್ತಾ ದಲಿತರ ಭಾವನೆಗಳಿಗೆ ಬೆಲೆಯೇ ಇಲ್ಲ ಎಂಬಂತೆ ಮಾತಾಡುತ್ತಾನೆ. ದಲಿತರ ಹೆಣ್ಣುಗಳ ದೈಹಿಕ ಸುಖ ಪಡೆದರೆ ಆಸ್ತಿ ಸಾಮಾಜಿಕ ಸ್ಥಾನಮಾನಕ್ಕೆ ಮನೆತನದ ಗೌರವಕ್ಕೆ ಯಾವುದೇ ರೀತಿಯಲ್ಲಿ ಧಕ್ಕೆ ಬರುವುದಿಲ್ಲ ಎಂಬ ತರ್ಕವನ್ನು ಮಂಡಿಸುತ್ತಾನೆ. ಹೀಗೆ ನುಗಡೋಣಿ ಅವರ ಕಥೆಗಳಲ್ಲಿ ಲೈಂಗಿಕ ಸಂಬಂಧಗಳು ವಿವಿಧ ಆಯಾಮಗಳಲ್ಲಿ ಕಾಣಸಿಗುತ್ತವೆ.

**ಉ. ಸುಧಾರಣಾವಾದಿ ನಿಲುವುಗಳು**

ಶತಶತಮಾನಗಳಿಂದ ತಲತಲಾಂತರಗಳಿಂದ ತುಳಿತಕ್ಕೆ ಸಿಲುಕಿದ ಕೆಳವರ್ಗದ ಜನತೆಯ ಬದುಕು ಬದಲಾಗಬೇಕು ಎಂಬ ಆಶಯ ಸಾಹಿತಿಗೆ ಇದ್ದೇ ಇರುತ್ತದೆ. ದಲಿತರು ಎಂದರೇ ಸಂಕಷ್ಟದಲ್ಲಿರುವವರು, ಅಸಹಾಯಕರು, ಜೀವಂತಿಕೆ ಇಲ್ಲದವರು, ಅನುಕಂಪಕ್ಕೆ ಯೋಗ್ಯರು ಎಂಬ ದಯನೀಯತೆಯ ಚಿತ್ರಣವೇ ಇರುತ್ತಿತ್ತು. ಅದಲ್ಲದೇ ದಲಿತ ಲೇಖಕರು ದಲಿತ ಸಂವೇದನೆಯ ಮೂಲಕ ಬದುಕನ್ನು ನೋಡುತ್ತ ರಕ್ತಮಾಂಸಗಳ ಅಸಲೀ ಅನುಭವಗಳ ಮೂಲಕ ಬದುಕಿನ ಅಪಾರ ಸಾಧ್ಯತೆಗಳನ್ನು ಬಿಚ್ಚಿಡುತ್ತಲೇ ಕಲಾ ಮಾಧ್ಯಮಕ್ಕೆ ಹೊಸ ಆಯಾಮವನ್ನು ನೀಡಿದರು.

ಹಾಗೆಯೇ ದಲಿತ ಸಾಹಿತ್ಯವು ಜೀವಪರವಾದುದು ಸಹಜವಾಗಿಯೇ ಅದು ಸೋತವರ ನೋವುಂಡವರ ಪರ ಬೆಂಗಾವಲಾಗಿ ನಿಲ್ಲುತ್ತದೆ. ದಲಿತ ಪ್ಯಾಂಥರ್, ದಲಿತ ಸಂಘ ಸಂಸ್ಥೆಗಳು

ಹೋರಾಟದ ಮೂಲಕ ದಲಿತರಿಗೆ ನ್ಯಾಯ ದೊರಕಿಸಲು ಪ್ರಯತ್ನಿಸಿದರೆ ವ್ಯಕ್ತಿಗಳ ವಿಚಾರಧಾರೆಗಳು ದಲಿತರ ಬದುಕನ್ನು ಸಮಗ್ರವಾಗಿ ಸುಧಾರಣೆ ಮಾಡಿ ಅವರ ಸರ್ವತೋಮುಖ ಪ್ರಗತಿಗೆ ದಾರಿದೀಪವಾದವು. ಬುದ್ಧ, ಬಸವಣ್ಣ, ಅಂಬೇಡ್ಕರ, ಜ್ಯೋತಿಭಾಫುಲೆ, ಪೆರಿಯಾರ್ ಅಂತಹವರ ವಿಚಾರಧಾರೆಗಳು ದಲಿತರ ಬದುಕಿನ ಮೇಲೆ ಪರಿಣಾಮ ಬೀರಿದವು.

ದಲಿತರ, ಅಸ್ಪೃಶ್ಯರ ಬದುಕನ್ನು ಸುಧಾರಿಸುವ ಪ್ರಕ್ರಿಯೆ ೧೨ನೆಯ ಶತಮಾನದಲ್ಲಿಯೇ ಬಸವಣ್ಣನವರು ಆರಂಭಿಸಿದರು. ಎಲ್ಲಾ ಜಾತಿಯವರಿಗೂ ಲಿಂಗಧಾರಣೆ ಮಾಡಿ ಸಮಾನತೆ ಸಾಧಿಸಿದರು. ಆದರೆ ಅವರ ವಿಚಾರಧಾರೆಗಳು ಇಂದಿಗೂ ಪೂರ್ಣ ಪ್ರಮಾಣದಲ್ಲಿ ಅನುಷ್ಠಾನಕ್ಕೆ ಬಂದಿಲ್ಲ. ಜಾತಿ ವ್ಯವಸ್ಥೆಯ ಜೀವಂತಿಕೆಯನ್ನು ದಾರಿ ಮಾಡಿಸುವ ಹೆಜ್ಜೆಗಳು ಕಥೆಯಲ್ಲಿ ಕಾಣಬಹುದು. "ಜಾತಿಗೀತಿಯಿಲ್ಲ ಮನುಷ್ಯರೆಲ್ಲ ಒಂದೇ ಎಂದ ಬಸವಣ್ಣೋಪ್ಪನೋರ ಮಾತು ಯಾವ ಕಾಲಕ್ಕೆ ಕರೇವಾತಾದೋ"[೨೯] ಎಂಬ ನಿರಾಸೆಯ ಧ್ವನಿ ಕಂಡು ಬರುತ್ತದೆ.

ದಲಿತ ಲೇಖಕರ ಮೇಲೆ ಅಂಬೇಡ್ಕರು ಗಾಢವಾಗಿ ಪ್ರಭಾವ ಬೀರಿದರು. ಹಾಗೆಯೇ ದಲಿತೇತರ ಲೇಖಕರೂ ಸಹ ಅಂಬೇಡ್ಕರರ ಚಿಂತನೆಗಳಿಂದ ಪ್ರಭಾವಿತರಾದರು. ೧೯೩೦ರಲ್ಲಿ ಅಂಬೇಡ್ಕರ ಬರೆದ "Who are the Shudras", "The Untouchables", ಕೃತಿಗಳಲ್ಲಿ ಪುರೋಹಿತಶಾಹಿಯು ಹೇಗೆ ಮನುಷ್ಯ, ಮನುಷ್ಯನನ್ನು ಒಡೆದು ಆಳುತ್ತಾನೆ? ಎಂಬುದನ್ನು ಬಿಚ್ಚಿ ತೋರಿಸಿದರು. ಈ ಬಗ್ಗೆ ಅರವಿಂದ ಮಾಲಗತ್ತಿಯವರು "ಹಿಂದೂ ವರ್ಣ ವ್ಯವಸ್ಥೆಯಲ್ಲಿ ಬರುವ ಬ್ರಾಹ್ಮಣರು ಇನ್ನುಳಿದ ಮೂರು ವರ್ಣಗಳ ಮೇಲೆ ಹಿಡಿತವನ್ನಿಟ್ಟುಕೊಂಡು ಬಂದರು ಅದೇ ರೀತಿ ಶೂದ್ರರು ಆರ್ಥಿಕ ಸಾಮಾಜಿಕ ಎರಡೂ ನೆಲೆಯಲ್ಲಿ ದಲಿತರ ಮೇಲೆ ಹಿಡಿತವನ್ನಿಟ್ಟುಕೊಂಡರು ಎಂಬುದನ್ನು ಸ್ಪಷ್ಟಪಡಿಸುತ್ತಾರೆ. ಶೂದ್ರರಿಗೆ ಅಂಬೇಡ್ಕರ್ ವಿಚಾರಗಳು ಅನಿವಾರ್ಯವಾಗಿ ಬೇಕಾಗಿದ್ದವು." ಹೀಗಾಗಿಯೇ "ಸೂರ್ಯನನ್ನು ಹೇಗೆ ಬಚ್ಚಿಡಲು ಸಾಧ್ಯವೇ ಇಲ್ಲ ಹಾಗೇ ಅದರ ಹೊಳಪು ಅಷ್ಟೊಂದು ಮಾನವಪರವಾಗಿರುವುದರಿಂದ ಅದು ಹೊಳೆದೇ ಹೊಳೆಯುತ್ತದೆ. ಆ ಹೊಳಪಿನಿಂದ ಮೂಲ ಸಂಸ್ಕೃತಿ, ಮೂಲ ಬದುಕಿನ ಸಾಧ್ಯತೆಗಳು ಅರಳಿಯೇ ಅರಳುತ್ತವೆ. ಅದಕ್ಕೆ ಕಾಲಬೇಕಷ್ಟೇ."[೩೦]

**'ಮೂಡಲು ಹರಿಯಿತು'** ಕಥೆಯಲ್ಲಿ ಅಂಬೇಡ್ಕರರ ಪ್ರಭಾವ ಕಂಡುಬರುತ್ತದೆ. ಅವರ "ಶಿಕ್ಷಣ, ಸಂಘಟನೆ, ಹೋರಾಟ" ಇಲ್ಲಿ ಸಾಕಾರಗೊಂಡಿವೆ. ಸಿದ್ದಪ್ಪ ಪ್ರಜ್ಞಾವಂತ ಅಕ್ಷರಸ್ಥನಾಗಿದ್ದ ಪದವಿ ಪಡೆದು ವಚನ ಸಾಹಿತ್ಯ ಓದಿಕೊಂಡಿದ್ದ. ಸಮಾನತೆ, ಸಹಬಾಳ್ವೆಯ, ಸಮಾಜ ಸೇವೆಯ ಮನೋಭಾವ ಹೊಂದಿದ್ದ. ಸಮಾನತೆಯ ಆಧಾರದ ಮೇಲೆ ಸಮಾಜ ನಿರ್ಮಾಣದ ಕನಸು ಕಂಡಿದ್ದ. ಅಂಬೇಡ್ಕರರ

ಪ್ರಭಾವಕ್ಕೊಳಗಾಗಿದ್ದ. ಅಂಬೇಡ್ಕರರ ನೆನಪಿಗಾಗಿ ತನ್ನ ಮಗನಿಗೆ 'ಸಿದ್ಧಾರ್ಥ' ಎಂದು ಹೆಸರಿಟ್ಟಿದ್ದ. ದಲಿತ ಕಥೆಗಾರರು ಯಾವ ಬಗೆಯ ಮೌಲ್ಯಗಳನ್ನು ಪ್ರತಿಪಾದಿಸುತ್ತಾರೆ ಎಂಬುದು ತುಂಬಾ ಕುತೂಹಲಕರವಾದುದು. ಇಡೀ ಇಂಡಿಯಾದ ಈ ಅಸ್ಪೃಶ್ಯತೆಯ ಸಂವೇದನೆ ಬಹಳ ಕಾಲದ ಒತ್ತಡವಾಗಿತ್ತು. ಅದಕ್ಕೊಂದು ಸಾಂಸ್ಕೃತಿಕ ನೆಪಬೇಕಿತ್ತು. ನುಗಡೋಣಿಯವರ ಕಥೆಗಳಲ್ಲಿ ಅಂಬೇಡ್ಕರರ ವಿಚಾರಧಾರೆಗಳು ಸಮೃದ್ಧವಾಗಿ ಬಿಂಬಿತವಾಗಿವೆ. **'ತಮಂಧದ ಕೇಡು'** ಕಥೆಯಲ್ಲಿ ದಲಿತರ ಬದುಕು, ಶಿಕ್ಷಣ ಜಾಗೃತಿಯಿಂದ ಬೆಳಕಾಗುವ ಪರಿಯನ್ನು ಹೇಳುತ್ತಾರೆ. ನೋವುಗಳ ಮಧ್ಯೆಯೇ ಬದುಕಲ್ಲಿ ಹೊಸ ಆಶಾಕಿರಣ ಮೂಡಿಬರುತ್ತದೆ. ಅಂತರ್ಜಾತಿ ವಿವಾಹ, ಸಾಮಾಜಿಕ ಸಮಾನತೆ, ಸುಶಿಕ್ಷಿತ ವಿಚಾರಧಾರೆಗಳು ವ್ಯಕ್ತವಾಗಿವೆ.

**'ನೆಲದ ಮರೆಯ ನಿಧಾನ'** ಕಥೆಯಲ್ಲಿ ಚಿನ್ನದ ಸರ ನ್ಯಾಯವಾಗಿ ತನಗೆ ಒಲಿದು ಬಂದರೂ ದಲಿತ ಯಲ್ಲಪ್ಪ ಅದನ್ನು ತಿರಸ್ಕರಿಸಿ ಹೃದಯ ವೈಶಾಲ್ಯತೆ ಮೆರೆದನು. ಯಲ್ಲಪ್ಪ ಅಕ್ಷರ ಕಲಿಯದವನಾದರೂ ಸಹ ಶಿಕ್ಷಣದ ಬಗ್ಗೆ ಆತ ತೋರುವ ಕಾಳಜಿ ಮಾದರಿಯಾದುದು. "ನಮ್ಮೂರಾಗ ನಮ್ಮ ಕಣ್ಣ ಮುಂದ ಸಾಲಿ ಗುಡಿ ಆಗ್ಲಿಲ್ಲ. ಸರ್ಕಾರದವರು ಮಾಡ್ತೀವಿ ಅಂಂಾಕತ್ತಿ ಒಂದು ತಲಿ ಹೋಗಾಕಾಯ್ತು. ನಮ್ಮೂರ ಚಿಕ್ಕೋರು ಸಾಲಿ ಕಲಿಬೇಕೇಂದ್ರ ಎಷ್ಟು ಕಷ್ಟ ಪಡುತ್ತಾನೆಂದು ನನಗೆ ಗೊತ್ತ. ಸಾಬ್ರೆ ನಮ್ಮೂರಾಗ ಲಿಂಗಮ್ಮನ ಹೆಸರಿಲ್ಲೆ ಸಾಲೆ ಕಟ್ಟಿಸಿಬಿಡ್ರಿ, ನನ್ಗ ಬಂಗಾರದ ಸರ ಬ್ಯಾಡ ಎಂದು ಮೆರೆಯುತ್ತಾನೆ."[೨೧]

**'ತಮಂಧದ ಕೇಡು'** ಕತೆಯಲ್ಲಿ ಅಂತರ್ಜಾತಿ ವಿವಾಹದ ಸಂದಿಗ್ಧ ಪರಿಸ್ಥಿತಿ ಎದುರಾದಾಗ ಬಸವವಣ್ಣನವರ ಪ್ರಸ್ತಾಪ ಬರುತ್ತದೆ. ೧೨ನೇ ಶತಮಾನದಲ್ಲಿ ಬಸವಣ್ಣವರು ನೆರವೇರಿಸಿದ ಅಂತರ್ಜಾತಿ ವಿವಾಹದ ಸಂದರ್ಭ ಈಗಲೂ ಪ್ರಸ್ತುತವೆನಿಸುತ್ತದೆ. ದುರುಗ ತನ್ನ ಮಗ ಚೆನ್ನನಿಗೆ ಬುದ್ಧಿವಾದ ಹೇಳುತ್ತಾ 'ಇದೇನು ಬಸವಣ್ಣಪ್ಪನ ಕಾಲ ಏನಲೆ? ಚಪ್ಪಲಿ ಹೊಲೆವ ಕೈಗೆ ಲಿಂಗ ಬರದ್ಕಾ ...' ಪ್ರಸ್ತುತ ಸನ್ನಿವೇಶದಲ್ಲಿ ಬಸವಣ್ಣನಂತವರ ಸಾಂಸ್ಕೃತಿಕ ಸುಧಾರಣಾವಾದಿ ನಾಯಕರ ಅನಿವಾರ್ಯತೆಯನ್ನು ಹೇಳುತ್ತದೆ. ಬಸವಣ್ಣನವರು ಇದ್ದಿದ್ದರೆ ಇಂದು ನನಗೆ ಇಂತಹ ಪರಿಸ್ಥಿತಿ ಬರುತ್ತಿರಲಿಲ್ಲ ಅವರ ನೈತಿಕ ಬೆಂಬಲದ ಕೊರತೆಯನ್ನು ಇಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

ಹಾಗೆಯೇ ಬಸವಣ್ಣನವರ ವಿಚಾರಗಳು ಇಂದಿಗೂ ಸಂಪೂರ್ಣವಾಗಿ ಅನುಷ್ಠಾನಕ್ಕೆ ಬಂದಿಲ್ಲ. ಜಾತಿ ವ್ಯವಸ್ಥೆಯ ಜೀವಂತಿಕೆಯನ್ನು **"ದಾರಿ ಮೂಡಿಸುವ ಹೆಜ್ಜೆಗಳು"** ಕತೆಯಲ್ಲಿ ಕಾಣಬಹುದು "ಜಾತಿ ನೀತಿಯಲ್ಲ ಮನುಷ್ಯರೆಲ್ಲ ಒಂದೇ ಎಂದ ಬಸವಣ್ಣಪ್ಪನೋರ ಮಾತು ಯಾವ ಕಾಲಕ್ಕ ಕರೇವಾತಾದೊ" ಎಂಬ ನಿರಾಸೆಯ ಧ್ವನಿ ಕಂಡುಬರುತ್ತದೆ.

ದಲಿತ ಬಂಡಾಯ ಕಥೆಗಳಲ್ಲಿ ಕಾರ್ಲ್‌ಮಾರ್ಕ್ಸ್‌ನ ಪ್ರಭಾವ ಇದ್ದೇ ಇರುತ್ತದೆ. ಉಳ್ಳವರು ಮತ್ತು ಇಲ್ಲದವರ ನಡುವಿನ ಹೋರಾಟದ ಚಿತ್ರಣ ನುಗಡೋಣಿಯವರ ಕಥೆಗಳಲ್ಲಿ ಕಂಡು ಬರುವುದು. 'ಪಕ್ಷಕ್ಕಲ್ಲದೇ ಪರಿಣಾಮ ಕಾಣಿಸದು' ಕಥೆಯಲ್ಲಿ ವರ್ಗಸಂಘರ್ಷದ ಸೃಷ್ಟಿರೂಪವನ್ನು ಕಾಣಬಹುದು. ಬಡವರ ಜಮೀನುಗಳನ್ನು ನುಂಗಿಹಾರುವ ಶ್ರೀಮಂತರ ದೌರ್ಜನ್ಯ ಅಟ್ಟಹಾಸಗಳನ್ನು ಹುಟ್ಟಡಗಿಸಲು ಕ್ರಾಂತಿಕಾರಿ ಗುಂಪೊಂದು ದಮನಕಾರಿ ನೀತಿ ಅನುಸರಿಸುತ್ತದೆ. ಶ್ರೀಮಂತರನ್ನು ಗುಂಡಿಟ್ಟುಕೊಲ್ಲುವ, ರಕ್ತಪಾತದಿಂದ ಕೂಡಿದ ಹೋರಾಟವು ನಕ್ಸಲ್ ಚಳುವಳಿಯ ಪ್ರತಿರೂಪದಂತಿದ್ದ ಶ್ರೀಮಂತರ ಜಮೀನನ್ನು ಕಸಿದುಕೊಂಡು ಬಡವರಿಗೆ ಹಂಚುವುದರ ಮೂಲಕ ಆರ್ಥಿಕ ಅಸಮಾನತೆಯನ್ನು ನಿವಾರಿಸುವ ಮಾರ್ಕ್ಸ್‌ನ ಆಶಯ ಕಥೆಯಲ್ಲಿ ಪರಿಣಾಮಕಾರಿಯಾಗಿ ನಿರೂಪಿತವಾಗಿದೆ.

ಕಥೆಯ ವಸ್ತುವಿಶ್ಲೇಷಣೆ ಎಂಬ ವಿಂಗಡನೆಯಲ್ಲಿ ಹಿಂದುಳಿದವರ ಬದುಕಿನ ನೋವು, ಸಂಕಟ, ದುಃಖ, ದುರಂತ, ಸಂಘರ್ಷ ಇವುಗಳಿಗೆ ಸಾಹಿತ್ಯದಲ್ಲಿ ಸ್ಥಾನವಿದೆ ಎನ್ನುವ ಸಂವೇದನೆ ಬಳಸಿಕೊಂಡ ಕನ್ನಡ ಬರಹಗಾರ ಅಮರೇಶ ನುಗಡೋಣಿ ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಸಾಹಿತ್ಯದಲ್ಲಿ ಅನೇಕ ಬರಹಗಾರರಲ್ಲಿ ಈ ವೈವಿಧ್ಯಮಯ ಸಾಹಿತ್ಯ ಈ ಕಾಲದ ಬರಹಗಾರರಲ್ಲಿ ಸಿಕ್ಕುತ್ತದೆ. ಒಂದು ವಿಧದಲ್ಲಿ ಈ ಹಿಂದುಳಿದ ಜನ ವರ್ಗಗಳ ಧ್ವನಿಯಾಗಿ ಬಂದವರಹಾಗೆ ಗೋಚರವಾಗುತ್ತದೆ.

**ಅಡಿ ಟಿಪ್ಪಣಿಗಳು :**

೧. ಮಣ್ಣು ಸೇರಿತು ಬೀಜ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ –೧೫

೨. ಅದೇ ಪುಟ

೩. ಪಕ್ವಕಲ್ಲದೆ ಪರಿಣಾಮ ಕಾಣಿಸಿದು ಕಥೆ, ಸವಾರಿ ಸಂಕಲನ : ಪುಟ –೨೦೦

೪. ಅದೇ, ಪುಟ ೨೦೫

೫. ಅದೇ, ಪುಟ ೨೦೪

೬. ಅದೇ, ಪುಟ ೨೦೫

೭. ಅದೇ, ಪುಟ ೨೦೬

೮. ದೈವಕ್ಕೆ ಮೊದಲು ಶರಣೆಂಬೆವು ಕಥೆ, ಮುಸ್ಸಂಜೆ ಕಥಾನಕಗಳು ಸಂಕಲನ : ಪುಟ ೪

೯. ಕೊರಡು ಕೊನರುವ ಪರಿ ಕಥೆ, ಮುಸ್ಸಂಜೆ ಕಥಾನಕಗಳು ಸಂಕಲನ : ಪುಟ ೪೬

೧೦. ಮಣ್ಣು ಸೇರಿತು ಬೀಜ ಮುನ್ನುಡಿ, ಕೆಲವು ಮಾತುಗಳು (ಮೊದಲ ಮುದ್ರಣ)

೧೧. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ ಪುಟ ೧೧

೧೨. ಅದೇ, ಪುಟ ೨೨

೧೩. ಮನ್ನಿಸಿ ಮೂಕಾದಮೇ ಮೇಲೆ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೧೨೦, ೧೨೧

೧೪. ಮಣ್ಣು ಸೇರಿತು ಬೀಜ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೮

೧೫. ಏ ದಿಲ್ ಮಾಂಗೇ ಮೋರ್ ಕಥೆ, ಸವಾರಿ ಸಂಕಲನ : ಪುಟ ೬೨

೧೬. ಮಣ್ಣ ಸೇರಿತು ಬೀಜ ಸಂಕಲನದ ಮುನ್ನುಡಿ ಪುಟ ೧೭

೧೭. ದಾರಿ ಮೂಡಿಸುವ ಹೆಜ್ಜೆಗಳು ಕಥೆ, ಮಣ್ಣ ಸೇರಿತು ಬೀಜ ಸಂಕಲನ : ಪುಟ ೨೨

೧೮. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ : ಪುಟ ೧೪

೧೯. ದಾರಿಮೂಡಿಸುವ ಹೆಜ್ಜೆಗಳು ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೨೦

೨೦. ಅರ್ಜುನಗಾಳಸೋಗಿ, ದಲಿತ ಕನ್ನಡ ಸಾಹಿತ್ಯ ಸಮಾಲೋಕನ : ಪುಟ ೬೦

೨೧. ನೆಲದ ಮರೆಯ ನಿಧಾನ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೮೭

## ಅಧ್ಯಾಯ – ೪

# ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಪ್ರಾದೇಶಿಕತೆ

ಯಾವುದೇ ಒಬ್ಬ ಬರಹಗಾರನಿಗೆ ತಾನು ವಾಸಿಸುವ ಪರಿಸರವು ಆತನ ಬರಹದ ಮೇಲೆ ಗಾಢವಾದ ಪ್ರಭಾವ ಬೀರುತ್ತದೆ. ಕವಿಗೆ ಆಗಲಿ, ಕಾದಂಬರಿಕಾರನಿಗೆ ಆಗಲಿ, ಕಥೆಗಾರನಿಗೆ ಆಗಲಿ ಪ್ರಾದೇಶಿಕ ಪ್ರಭಾವವಿಲ್ಲದೇ ಆತನು ಬರಹದಲ್ಲಿ ಗಟ್ಟಿತನ ತೋರಲು ಸಾಧ್ಯವಾಗುವುದೇ ಇಲ್ಲ. ಕುವೆಂಪುರವರಿಗೆ ಅವರು ಬಾಲ್ಯದಲ್ಲಿ ಕಳೆದ ಕುಪ್ಪಳಿಯ ಪರಿಸರ, ಮಲೆನಾಡು, ಕಾಡು, ಗಿರಿಶಿಖರ, ನದಿ ಎಲ್ಲವೂ ಅವರ ಕಾವ್ಯ, ಕಾದಂಬರಿಗಳಲ್ಲಿ ಜೀವತಳೆದು ಕೃತಿರೂಪ ಪಡೆದಿವೆ. ನಿಸರ್ಗ ಅವರನ್ನು ಗಾಢವಾಗಿ ಪ್ರಭಾವಿಸಿ ಅವರ ಕೃತಿಗಳುದ್ದಕ್ಕೂ ಕಣಕಣದಲ್ಲೂ ಮಲೆನಾಡಿನ ಪರಿಸರವೇ ತುಂಬಿದೆ. ನಿಸರ್ಗದ ಕವಿಯಾದ ಅವರನ್ನು ಕನ್ನಡದ ವರ್ಡ್ಸವರ್ತ್ ಎಂದೇ ಕರೆಯುತ್ತೇವೆ. ಹಾಗೆ ಕಾರಂತರ ಕಾದಂಬರಿಗಳಲ್ಲಿ ಕರಾವಳಿಯ ಪರಿಸರ, ಕಡಲು ತುಳುನಾಡ ಸಂಸ್ಕೃತಿ ದಟ್ಟವಾಗಿ ಪ್ರಭಾವಿಸಿದೆ. ಕಾರಂತರ ಕಾದಂಬರಿಗಳಲ್ಲಿ ಪ್ರಾದೇಶಿಕ ನಿರ್ದಿಷ್ಟತೆ (athenticity) ಇದೆ. ಕಾರಂತರು ದಟ್ಟವಾದ ಜೀವನಾನುಭವ, ಜನರ ಬದುಕು ಬವಣೆಗಳನ್ನು ತೀರಾ ಹತ್ತಿರದಿಂದ ಕಂಡವರಾದ್ದರಿಂದ ಎಲ್ಲವನ್ನೂ ಅವರ ಕಾದಂಬರಿಗಳಲ್ಲಿ ದಾಖಲಿಸುತ್ತಾ ಹೋದರು. ಹಾಗಾಗಿ "ಚೋಮನದುಡಿ", "ಮರಳಿಮಣ್ಣಿಗೆ"ಯಂತಹ ಶ್ರೇಷ್ಠ "Master Piece" ಅನ್ನಿಸುವಂತಹ ಕಾದಂಬರಿಗಳು ಅವರಿಂದ ಮೂಡಿಬಂದವು. ಲೇಖಕನು ತನ್ನ ಪ್ರಾದೇಶಿಕತೆಯೊಂದಿಗೆ ಹೊಂದಿರುವ ಸಂಬಂಧ "ಸಾವಯವ ಸಂಬಂಧ" ಸ್ವರೂಪದ್ದು. ಇಲ್ಲಿ ಯಾವುದೇ ರೀತಿಯ ಕೃತಕತೆ, ಕೃತ್ರಿಮತೆಗೆ ಅವಕಾಶವೇ ಇಲ್ಲ. ಏನಿದ್ದರೂ ಸಹಜ ಸ್ವರೂಪದ್ದಾಗಿರುತ್ತದೆ.

ಕುವೆಂಪು, ಕಾರಂತರಂತಹ ಕನ್ನಡದ ಮೇರು ಸಾಹಿತಿಗಳಲ್ಲಿ ಪ್ರಕೃತಿದತ್ತವಾದ ಕಾಡು–ಕಡಲು ಅವರ ಸಾಹಿತ್ಯ ರಚನೆಗೆ ಭಿತ್ತಿಯಂತೆ ಹಿನ್ನೆಲೆಯಾಗಿ ಮೂಡಿಬಂದಿದೆ. ಕುವೆಂಪುರವರಿಗೆ ಸಾಹಿತ್ಯಕ್ಕೆ ಮಲೆನಾಡು ಹಳ್ಳಿ ಪ್ರದೇಶ ಹಿನ್ನೆಲೆಯಾದರೆ, ಕಾರಂತರಿಗೆ ಕಡಲು ಹಿನ್ನೆಲೆಯಾಗಿ ಪ್ರೇರಣೆಯಾಗಿದೆ. ಕನ್ನಡ ಸಾಹಿತ್ಯಕ್ಕೆ ಹೈದರಾಬಾದ–ಕರ್ನಾಟಕ ಭಾಗದ ಕೊಡುಗೆ ಮರೆಯಲಾರದಂತಹುದ್ದು. ಈ ಭಾಗದ ಸಾಹಿತಿಗಳಿಗೆ ಪ್ರಾದೇಶಿಕ ಹಿನ್ನೆಲೆಯೆಂದರೇ ಬಯಲುಸೀಮೆಯ ಬಿಸಿಲು ನಾಡಿನ ಬದುಕೇ ಬರಹದ ಪ್ರೇರಕಶಕ್ತಿಯಾಗಿದೆ. ಆ ಪ್ರದೇಶದ ಜನರ ಬದುಕು, ಕಲ್ಲುಮುಳ್ಳಿನ ಹಾದಿ, ಕಡುಬಡತನ, ನಿರುದ್ಯೋಗ, ಹಸಿವು, ಆಕ್ರೋಶ, ಕ್ರೂರ ಫ್ಯೂಡಲ್ ವ್ಯವಸ್ಥೆ, ಜಾತಿ ವ್ಯವಸ್ಥೆಯ ಕಟ್ಟುಪಾಡುಗಳು, ಎಲ್ಲಾ ಕಷ್ಟಕೋಟಲೆಗಳ ನಡುವೆ ಸಾಹಿತ್ಯ ಮೈದಳೆದಿದೆ.

ಆ ಭಾಗದ ಲೇಖಕರಿಗೆ ಜನರ ಪಾಡೇ ಹಾಡಾಗುತ್ತದೆ. ಈ ಪ್ರದೇಶ ಮತ್ತು ಜನರೊಂದಿಗೆ ಲೇಖಕರು ಅವಿನಾಭಾವ ಸಂಬಂಧ ಹೊಂದಿದ್ದಾರೆ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಕರುಳು ಬಳ್ಳಿಯ ಸಂಬಂಧ. ಮಣ್ಣಿನೊಂದಿಗೆ ಗಾಢವಾದ ಸಂಬಂಧ ಹೊಂದಿದ್ದಾರೆ. ಶಾಂತರಸ, ಚೆನ್ನಣ್ಣವಾಲೀಕಾರ, ಗೀತಾನಾಗಭೂಷಣ, ಅಮರೇಶ ನುಗುಡೋಣಿ, ಮಹಾಂತೇಶ ನವಲಕಲ್, ಕಲಿಗಣನಾಥ ಗುಡುದೂರು, ಹೈದರಾಬಾದ್ ಕರ್ನಾಟಕದ ಬಹುಮುಖ್ಯ ಕಥೆಗಾರರಾಗಿದ್ದಾರೆ. ಎಲ್ಲರ ಕಥೆಗಳಲ್ಲೂ ಪ್ರಾದೇಶಿಕತೆ ಜೀವಂತವಾಗಿದೆ. ತಮ್ಮ ಸಾಹಿತ್ಯದ ಅಸ್ತಿತ್ವದ ಜೊತೆಗೆ ಪ್ರಾದೇಶಿಕ ಅಂಶಗಳ ಸಮನ್ವಯ ಸಾಧಿಸಿದ್ದಾರೆ.

ಅಮರೇಶ ನುಗುಡೋಣಿಯವರ ಕಥೆಗಳು ಹೈದ್ರಾಬಾದ್ ಕರ್ನಾಟಕ ಭಾಗದ ವಾಸ್ತವಿಕ ಚಿತ್ರಣವನ್ನು ಹೆಜ್ಜೆ ಹೆಜ್ಜೆಗೂ ಬಿಂಬಿಸುತ್ತವೆ. ಅವರ ಕಥೆಗಳಲ್ಲಿ ಪ್ರಾದೇಶಿಕತೆಯು ಕ್ರಿಯಾಶೀಲತೆಯ ಜೊತೆಗೆ ಜೀವಂತಿಕೆಯಿಂದ ಕೂಡಿದೆ. ಅವರ ಕಥೆಗಳಲ್ಲಿ ಈ ಭಾಗದ "ಉಳ್ಳವರ ಸಣ್ಣತನ ಹಾಗೂ ಇಲ್ಲದವರ ದೊಡ್ಡತನ" ಕಂಡು ಬರುತ್ತವೆ. ವರ್ಗ ಸಂಘರ್ಷ, ಜಾತಿ ವ್ಯವಸ್ಥೆಯ ಮುಖಗಳ ಅನಾವರಣವಾಗಿದೆ. ಅಮರೇಶ ನುಗುಡೋಣಿಯವರು ದಲಿತ ಜೀವನದ ಅಂತರಂಗವನ್ನು ತಮ್ಮ ಕಥೆಗಳಲ್ಲಿ ತೆರೆದಿಡುತ್ತಾರೆ.

ಅಮರೇಶ ನುಗುಡೋಣಿಯವರ ಕಥೆಗಳ ಕೇಂದ್ರ ಸ್ಥಾನವೆಂದರೆ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ ಗ್ರಾಮೀಣ ಪ್ರದೇಶ. ಅದನ್ನು ಅವರು ಕುಸುರಿ ಕೆತ್ತನೆಯಂತೆ ಸಾಂದರ್ಭಿಕವಾಗಿ, ನೈಜವಾಗಿ ಹೆಚ್ಚು ಅಥೆಂಟಿಕ್ ಆಗಿ ಬಳಸಿಕೊಂಡಿದ್ದಾರೆ. ಅವರೇ ಹೇಳುವಂತೆ ಅವರ ಕಥೆಗಳಿಗೆ ಅವರ ಬಾಲ್ಯದ ಅನುಭವಗಳೇ ಪ್ರೇರಣೆ. ಬಾಲ್ಯದಲ್ಲಿ ಕೌಟುಂಬಿಕ ಪರಿಸರ, ನೆರೆಹೊರೆ ಬಾಂಧವ್ಯ, ಊರು-ಕೇರಿ ಮತ್ತು ಊರಿನ ಸರಹದ್ದು ಇತ್ಯಾದಿ ಮೂಲಗಳಿಂದ ದೊರಕಿದ ಪ್ರೇರಣೆ ಪ್ರಭಾವಗಳಿಂದಲೇ ಒಂದು ಪ್ರಪಂಚವನ್ನು ಪುನಃ ಸೃಷ್ಟಿಸುವ ಸಾಮರ್ಥ್ಯ ಪಡೆಯುತ್ತಾರೆ.

ಅಮರೇಶ ನುಗುಡೋಣಿಯವರ ಬದುಕು ಸರಳವಾಗಿರಲಿಲ್ಲ. ಅವರು ಬದುಕಿನುದ್ದಕ್ಕೂ ಅನೇಕ ಸವಾಲುಗಳನ್ನು ಎದುರಿಸಿ ಮೇಲೆ ಬಂದವರು. ತಾವು ಬದುಕಲ್ಲಿ ಅನೇಕ ಸೋಲು ಕಷ್ಟಕೋಟಲೆಗಳನ್ನು ಎದುರಿಸಿದರು. ಶಾಲಾ ಕಾಲೇಜು ಜೀವನದ ನಂತರ ಉದ್ಯೋಗದ ಅನ್ವೇಷಣೆಯಲ್ಲಿ ಸಂದಿಗ್ಧ ಪರಿಸ್ಥಿಯ ಅನುಭವಗಳು ಅವರ ಅಂತರಂಗದ ತುಡಿತ ಮಿಡಿತಗಳೆಲ್ಲಾ ಅವರ ಕಥೆಗಳಿಗೆ ಸ್ಫೂರ್ತಿಯಾಗಿದೆ.

**'ಮನ್ನಿಸಿ ಮೂಕಾದ ಮೇಲೆ'** ಕಥೆಯಲ್ಲಿ ವ್ಯಕ್ತಿಯ ಮನಸ್ಸು, ನಗರ ಜೀವನ, ನಗರದ ಥಳುಕು ಬಳಕು ಪ್ರಪಂಚದಿಂದ ಬೇಸತ್ತು, ಹೆಂಡತಿ ಮಕ್ಕಳು ಹೀಗೆ ಸುಖಮಯ ಸಂಸಾರದ ನಡುವೆಯೂ

ಮತ್ತೆ ತನ್ನ ಹುಟ್ಟೂರಾದ ಹಳ್ಳಿಯತ್ತ ತುಡಿಯುತ್ತದೆ. ಈ ಕಥೆಯು ಶಿವರಾಮ ಕಾರಂತರ 'ಚಿಗುರಿದ ಕನಸು' ಕಾದಂಬರಿಯಂತೆಯೇ ಮೂಲನೆಲೆಯತ್ತ ಮನಸ್ಸು ಹಾತೊರೆಯುತ್ತದೆ ಎಂಬುದನ್ನ ಸ್ಪಷ್ಟಪಡಿಸುತ್ತದೆ. "ಆ ದಿನದಾಗ ದೊಡ್ಡಮ್ಮ ನನ್ನ ಸಲುವಾಗಿ ಜೀವವೇ ಒತ್ತಿಟ್ಟಂತೆ ದುಡಿದು ಹಣ್ಣಾದಳು' ಎಂದು ನಿಟ್ಟುಸಿರು ಬಿಟ್ಟು ಎದ್ದು ಕುಳಿತ ಮಲ್ಲಿಕಾರ್ಜುನ ತನ್ನ ಮನೆತನದ ಕಳ್ಳುಬಳ್ಳಿಯ ಇತಿಹಾಸ ನೆನೆಸಿಕೊಂಡು ಅದರ ಭಾಗವಾಗಬೇಕಿದ್ದ. ತಾನು ಹೀಗೆ ದೂರ ಸರಿದು ನಿಂತದ್ದು ಎಂಥ ಅವಿವೇಕತನವಾತಲ್ಲ ಎಂದು ನರಳಿದ. ನಿದ್ದೆ ಬಳಿ ಸುಳಿಯಲಿಲ್ಲ. ಸಂಕಟ ತಡಿಯಲಾರದೆ ಎದ್ದು ಹೊರಗೆ ಬಂದು ನಿಂತ. ಸಣ್ಣಾಗಿ ಗಾಳಿ ಬೀಸುತ್ತಿತ್ತು. ಮನಸ್ಸಿಗೆ ಸಮಾಧಾನವಾಗ ತೊಡಗಿತು. ಕಗ್ಗತ್ತಲು! ನಿಶ್ಯಬ್ಧ ವಾತಾವರಣ! ತಿಳಿಯಾದ ಆಕಾಶದಲ್ಲಿ ಕೋಟ್ಯಾನು ಕೋಟಿ ಚುಕ್ಕೆಗಳು ಕಣ್ಣು ಬಿಡುತ್ತಿದ್ದವು. ಗುಡಿಸಲ ಮುಂದೆ ತನ್ನ ತುಂಡು ಹೊಲ ಇತ್ತು. ಚಿಕ್ಕವನಿದ್ದಾಗ ಏನೋ ಅದರಲ್ಲಿ ಅಷ್ಟು ಇಷ್ಟು ದುಡಿದಿದ್ದ. ಕಾಲೇಜು ಓದುವಾಗ ಏನು ಮುಂದೆ ನೌಕರಿ ಮಾಡುವಾಗ ಇಲ್ಲಿ ಭಾವಿ ತೋಡಿಸಬೇಕು ತೋಟ ಮಾಡಬೇಕು. ತನಗೆ ಈ ಊರು ಎಂದರೆ ತನ್ನ ಜೀವನಾಡಿ ಎಂದಲ್ಲ ಯೋಚಿಸಿದ್ದದು ನೆನಪಾಯಿತು."[7] ಇಲ್ಲಿ ಪ್ರಾದೇಶಿಕತೆಯೊಂದಿಗೆ ಒಡನಾಟ, ಗಾಢ ಸಂಬಂಧ ಕಥೆಗೆ ಪೂರಕವಾಗಿ ಕಂಡುಬರುತ್ತದೆ. ನುಗುಡೋಣಿಯವರು ವಾಸ್ತವತೆಯ ಎಲ್ಲೆಯನ್ನು ಮೀರದೇ ಅವರು ತಾವು ಬಾಲ್ಯದಲ್ಲಿ ಕಂಡು, ಕೇಳಿದ, ಗ್ರಹಿಸಿದ ಅನುಭವಿಸಿದ ಅಂಶಗಳನ್ನೇ ಕಥೆಗಳಲ್ಲಿ ತರುತ್ತಾರೆ.

ನುಗುಡೋಣಿಯವರು ತಮ್ಮ ಪ್ರದೇಶದ ಜನಜೀವನವನ್ನು ಕುರಿತು "ನನ್ನೂರು (ಮಾನ್ವಿ ತಾಲೂಕಿನ ನುಗುಡೋಣಿ ಗ್ರಾಮ) ತುಂಬಾ ಚಿಕ್ಕದು. ಊರು–ಕೇರಿ ಸುತ್ತಿಕೊಂಡೇ ಹತ್ತಾರು ಮನೆಗಳು, ನೂರಾರು ಜನ ಅಷ್ಟೇ ನೋಟಿನ ವ್ಯವಹಾರ ಕಮ್ಮಿ. ಕಾಳು–ಕಡಿಗಳೇ ವ್ಯವಹಾರದಲ್ಲಿ ಹಣದ ಬದಲು ಬಳಕೆಯಾಗುತ್ತಿದ್ದವು. ವರ್ಷಕ್ಕೆ ಆಗುವಷ್ಟು ಕಾಳುಕಡಿಗಳನ್ನು ಮನೆಯಲ್ಲಿಟ್ಟುಕೊಂಡವರೇ ಸಂತೃಪ್ತರು. '....ಕಸುಬುದಾರರಿಗೆ ಕಾಳುಕಡಿಗಳನ್ನೇ ಅಳೆದು ಕೊಡಲಾಗುತ್ತಿತ್ತು. ಅಷ್ಟೇಯಲ್ಲಾ ನಮ್ಮೂರಿಗೆ ಬಂದ ನೆಲೆಸಿದ್ದ ವೈದ್ಯನಿಗೂ ಅಪ್ಪ ಭತ್ತವನ್ನೇ ಅಳೆದು ಕೊಡುತ್ತಿದ್ದ. ವರ್ಷಕ್ಕೆ ಒಮ್ಮೆ ಊರುಕೇರಿಯಲ್ಲಿ 'ಕೈಗಡ ಎನ್ನುವ ಕೊಡು ಕೊಳ್ಳುವ ಸಂಬಂಧ ಜೀವಂತಿಕೆಯಿಂದಿತ್ತು ಸೃಜನಶೀಲವಾಗಿತ್ತು. ಇದು ನನ್ನ ಬಾಲ್ಯ ಕಾಲದ ಕಥೆ. ಈಗ ಊರುಕೇರಿಯಲ್ಲಿ ನೋಟಿನ ಹೊರೆತು ವ್ಯವಹಾರವಿಲ್ಲ. 'ಕೈಗಡ'ವೆಂದು ಒಂದು ಲೋಟ ಹಾಲನ್ನು ಕೇಳಲು ನೆರೆಮನೆಗೆ ಹೋಗುವಂತಿಲ್ಲ. ಯಾಕೆಂದರೆ ಹಳ್ಳಿಯಲ್ಲೂ ಹಾಲಿನ ಭೂಥ್ ಬಂದು ಕುಳಿತಿದೆ. ಸಮಾಜ ಸ್ಥಿತ್ಯಂತರ ಕಂಡಿದೆ, ನಿಜ ಆದರೂ ನನ್ನೊಳಗೆ 'ಕೈಗಡ'ದ ವ್ಯವಹಾರವೂ ನೋಟಿನ ಮೂಲಕ ನಡೆಯುವ ವ್ಯವಹಾರವು ನೆನಪಿನಲ್ಲಿ ಇದೆ."[8] ಎಂದು ಹಳ್ಳಿಯ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುತ್ತಾರೆ. ಅಂದರೆ ಹಣವೆಂಬುದು ಬದುಕಿಗೆ ಅನಿವಾರ್ಯ ಆಗಿರಲೇ ಇಲ್ಲ.

ಹಳ್ಳಿಗರಲ್ಲಿ ಪರಸ್ಪರ ಸೌಹಾರ್ದಯುತ ಹಾಗೂ ಅನುವು ಆಪತ್ತಿಗೆ ನೆರವಾಗುವ ಹೃದಯ ವೈಶಾಲ್ಯತೆ ಇತ್ತು.

ಈ ಪರಿಸರದ ಸ್ಥಿತಿಗತಿ, ಜನಜೀವನ, ಅನುಭವಗಳು ಕಥೆಗೆ ನೆರವಾಗುವಾಗ, ನಿರೂಪಣೆಗೊಳ್ಳುವಾಗ ಕಥೆಗಾರನ ತಾತ್ವಿಕತೆಯೇ ಪ್ರಧಾನ ಪಾತ್ರವಹಿಸುತ್ತದೆ. ಅಮರೇಶ ನುಗಡೋಣಿಯವರು ಯಾವುದೇ ಒಂದು ತತ್ವ ಸಿದ್ಧಾಂತವಾಗಲೀ, ಪಂಥವಾಗಲೀ ("ಇಸಂ"ಗಳಿಗೆ) ಜೋತು ಬಿದ್ದವರಲ್ಲ. ಅವರದು ಏನಿದ್ದರೂ 'ನೈಜ ಮಾನವೀಯತೆ', 'ಮಾನವ ಕುಲಂ ತಾನೊಂದೇ ವಲಂ' ಎಂಬಂತೆ ಬಡವರ ಬದುಕು ಹಸನಗಾಬೇಕು ಎಂಬ ಕಾಳಜಿಯಿಂದಲೇ ಕಥೆಗಳನ್ನು ಬರೆದರು. ಮಾನವನ ಆಸಕ್ತಿಯ ವಿಷಯವೇ ಇವರ ಕಥೆಯ ಜೀವಾಳ. ಪ್ರಾದೇಶಿಕತೆಯೇ ಕಥೆಯ ಉಸಿರಾಯಿತು.

ನುಗುಡೋಣಿಯವರು ಹಳ್ಳಿಯ ಬಡಜನರ ಬದುಕನ್ನು ತೀರಾ ಹತ್ತಿರದಿಂದ ಕಂಡಿದ್ದರು. ಅವರು ಜಾತಿ ವ್ಯವಸ್ಥೆಯ, ಶೋಷಣೆಯ ತೀವ್ರತೆಯನ್ನು ಕಣ್ಣಾರೆ ಕಂಡಿದ್ದರು. ಹಾಗಾಗಿ ಆರ್ಥಿಕವಾಗಿ ಬಡವರಾಗಿರುವವರ ನೋವು, ನಿರಾಸೆ, ದುಃಖ, ಸಂಕಷ್ಟಗಳ, ವೇದನೆಗಳ ಸ್ಪಷ್ಟ ಅರಿವು ನುಗುಡೋಣಿಯವರಿಗಿದೆ. ಅವರು ಬಡವರ ಜೊತೆಗೆ ಒಡನಾಡಿ ಬೆಳೆದರು. ಹಾಗಾಗಿ ಅವರು ತಮ್ಮ ಕಥೆಗಳಲ್ಲಿ ಹಳ್ಳಿಯ ಸಮಸ್ಯೆಗಳನ್ನು ಒಡಮೂಡಿಸುವಾಗ ಸಹಜವಾಗಿಯೇ ನಿರೂಪಿಸುತ್ತಾರೆ. ಎಲ್ಲಿಯೂ ಅವರು ಭಾವೋದ್ವೇಗಕ್ಕೆ ಒಳಗಾಗದೇ ನಿರುದ್ವಿಗ್ನತೆಯಿಂದಲೇ ಕ್ಲಿಷ್ಟಕರ ಸನ್ನಿವೇಶವನ್ನು ಕಥಾನಕವಾಗಿಸುತ್ತಾರೆ. ಗ್ರಾಮೀಣ ಪ್ರದೇಶದ ಜೀವನವನ್ನೇ ತಮ್ಮ ಕಥಾವಸ್ತುವಾಗಿ ಆಯ್ಕೆ ಮಾಡಿಕೊಂಡರು. ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಚಿಂತನೆಗಳ ಆದರ್ಶಗಳು ನುಗುಡೋಣಿಯವರನ್ನು ಗಾಢವಾಗಿ ಪ್ರಭಾವಿಸಿದಂತಿದೆ. ಕಥೆಗಳು ಫಲಪ್ರದವಾಗಿ ಜೀವತಳೆಯಲು ಹಳ್ಳಿಗಳೇ ಫಲವತ್ತಾಗಿ ನೆಲೆಯಾಗಬಲ್ಲವೆಂಬ ಸೂಕ್ಷ್ಮತೆಯನ್ನು ಅವರು ಗ್ರಹಿಸಿದ್ದಾರೆ. ಹಳ್ಳಿಗಳು ತುಂಬಾ ಸೃಜನಶೀಲವಾಗಿದ್ದರಿಂದ ಹಳ್ಳಿಯ ಜನ ವಾಸಿಸುವ ಪ್ರದೇಶ ಗುಡಿಸಲು, ಹಟ್ಟಿ, ಗುಡ್ಡಗಾಡು ಎಲ್ಲವನ್ನೂ ಅಲೆದಾಡಿ ಸಮಸ್ಯೆಯ ಭೀಕರತೆಯನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರು.

ಬಯಲುಸೀಮೆಯ ವ್ಯವಸಾಯ ಮಳೆಯನ್ನೆ ಅವಲಂಬಿಸಿರುವಂತಹುದ್ದು. ಕಾಲಕ್ಕೆ ಸರಿಯಾಗಿ ಮಳೆಬರದೇ ಮುಂಗಾರು ಕೈಕೊಟ್ಟರೇ ಜನರು ಬರಗಾಲದಿಂದ ತತ್ತರಿಸಿ ಬೆಂಗಳೂರು, ಮುಂಬೈ, ಪುಣೆಯಂತಹ ಮಹಾನಗರಗಳಿಗೆ ವಲಸೆ ಹೋಗುವ ಕರುಣಾಜನಕ ಪರಿಸ್ಥಿತಿ. ದುಡಿಯುವ ಮಕ್ಕಳು ಊರುಬಿಟ್ಟು ಹೋದವರ ಪಾಡು ಒಂದು ರೀತಿಯಾದರೇ ಇನ್ನೂ ಹಳ್ಳಿಯಲ್ಲಿ ಉಳಿದಿರುವ ವೃದ್ಧರ ಪಾಡಂತೂ ಹೇಳತೀರದಷ್ಟು ದಯನೀಯವಾಗಿರುತ್ತದೆ.

ಉದಾರೀಕರಣ, ಖಾಸಗೀಕರಣ, ಜಾಗತೀಕರಣದಿಂದಾಗಿ ಹಳ್ಳಿಯ ಜನಜೀವನದ ಸ್ವರೂಪವೇ ಬದಲಾಗಿದೆ. ಗಣಿಗಾರಿಕೆಯು ಗ್ರಾಮೀಣ ಜೀವನವನ್ನೇ ಅಲ್ಲೋಲ ಕಲ್ಲೋಲಗೊಳಿಸಿ ಮನುಷ್ಯ ಸಂಬಂಧಗಳನ್ನೇ ಛಿದ್ರವಿಚ್ಛಿದ್ರಗೊಳಿಸಿದೆ. ಅತ್ಯಂತ ಬೆಲೆಬಾಳುವ ನೈಸರ್ಗಿಕ ಸಂಪತ್ತು ಹಗಲಿರುಳು ಲೂಟಿಯಾಗಿ ಭೂಮಿಯೆಲ್ಲಾ ಬರಡಾಗುವ ಸ್ಥಿತಿ ಬಂದೊದಗಿದೆ. ಕೆಲವರ ಸ್ವಾರ್ಥಕ್ಕೆ ಹಲವರ ಬದುಕು ಹಾಳಾಗುತ್ತಿವೆ. ನಮಗೆ ಸಕಲವನ್ನು ನೀಡಿ ಪೋಷಿಸುತ್ತಿರುವ ಪ್ರಕೃತಿಯನ್ನು ನಾಶಪಡಿಸುವ ದುರುಳತನವನ್ನು "ಒಡಲುಗೊಂಡವರು" ಮತ್ತು "ದಾಳಿ ನಡೆದಾವೋ ಅಣ್ಣ" ಕಥೆಗಳಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ.

ಬಿಟ್ಟು ಬಿಡದಂತೆ ನಿರಂತರವಾಗಿ ನಡೆದು ಬಂದಿರುವ ಗಣಿಗಾರಿಕೆಯಿಂದಾಗಿ ಸ್ಥಳೀಯರ ಜೀವನ ದುರಸ್ಥಿ ಮಾಡಲಾರದಷ್ಟು ಹಾಳಾಗಿ ಮನೆ-ಮಠ ಕಳೆದುಕೊಂಡು ಎಷ್ಟೋ ಜನ ಬೀದಿಗೆ ಬಿದ್ದಿದ್ದಾರೆ. ಮತ್ತೊಂದು ಪಡೆಯಲಾರದ ಬೆಲೆಬಾಳುವ ಭೂಸಂಪತ್ತು ದೇಶದಿಂದ ಹೊರಹೋಗುತ್ತದೆ. ಬೆರಳೆಣಿಕೆಯಷ್ಟು ಕೆಲವು ವ್ಯಕ್ತಿ, ಕುಟುಂಬಗಳು ಮಾತ್ರ ಸುಖಸಂತೋಷ, ಸಮೃದ್ಧಿ ಶ್ರೀಮಂತಿಕೆಯಿಂದ ಬೀಗಿದರೆ ಉಳಿದವರ ಬಾಳು ಹೇಳತೀರದಷ್ಟು ಗೋಳಿನಿಂದ ಕೂಡಿದೆ. ಪ್ರಾಕೃತಿಕ ಸಂಪತ್ತು ಹಸಿರಿನಿಂದ ಕಂಗೊಳಿಸುತ್ತಿದ್ದ ಬೆಟ್ಟ ಗುಡ್ಡಗಳನ್ನು ಗಣಿಗಾರಿಕೆ ನುಂಗಿ ಹಾಕುತ್ತಿದೆ. ಈ ಭಾಗದ ಪ್ರದೇಶಗಳಲ್ಲಿ ಹೊಲ ಗದ್ದೆಗಳಲ್ಲಿ ಬೆಳೆಯುತ್ತಿದ್ದ ಬೆಳೆಗಳ ಪ್ರಮಾಣ ದಿನದಿಂದ ದಿನಕ್ಕೆ ಕುಸಿದು ಪರಿಸರದಲ್ಲಿ ಎಲ್ಲವೂ ಗಣಿಗಾರಿಕೆಯ ಕೆಂಪುದೂಳಿನಿಂದ ಸರ್ವನಾಶದತ್ತ ಸಾಗಿದೆ.

ಈ ಭಾಗದ ಹಳ್ಳಿಜನರನ್ನು ಕಾಡುತ್ತಿರುವ ಮತ್ತೊಂದು ಸಮಸ್ಯೆಯೆಂದರೆ ಅನಕ್ಷರತೆ. ಜನರು ಆರ್ಥಿಕವಾಗಿ ಬಡತನದಲ್ಲಿರುವುದರಿಂದ ಹಾಗೂ ಅಕ್ಷರ ಜ್ಞಾನದ ಬಗ್ಗೆ ತಿಳುವಳಿಕೆ ಕಡಿಮೆ ಇರುವುದರಿಂದ ತಮ್ಮ ಮಕ್ಕಳನ್ನು ಸಹ ಶಾಲೆಗೆ ಕಳಿಸದೇ, ದುಡಿಯಲು ಜೀತಕ್ಕೋ, ಹೊಲಗದ್ದೆಗಳ ಕೆಲಸಕ್ಕೋ ಹಚ್ಚುತ್ತಾರೆ. ಹಾಗಾಗಿಯೇ ಇವರು 'ಹೆಬ್ಬೆಟ್ಟಿನ ಸಹಿ ಬಾಳಿಗೆ ಕಹಿ' ಎಂಬಂತೆ ತಮ್ಮ ಬಾಳನ್ನು ನರಕಸದೃಶ್ಯವಾಗಿ ಮಾಡಿಕೊಂಡಿದ್ದಾರೆ. ಅಜ್ಞಾನದ ಕತ್ತಲೆಯಲ್ಲೇ ದಿನ ಕಳೆಯುತ್ತಿದ್ದಾರೆ. ಹೀಗಾಗಿಯೇ ಹಳ್ಳಿಯ ಹಲವಾರು ಬಗೆಯ ಸಂಕೀರ್ಣ ಸಮಸ್ಯೆಗಳನ್ನೆಲ್ಲಾ ಕಥೆಯಾಗಿ ಸೃಷ್ಟಿಸಿ ಗ್ರಾಮಗಳ ಜನಜೀವನದ ಜೊತೆಗೆ ಲೇಖಕರು ಅನುಸಂಧಾನ ನಡೆಸುತ್ತಾರೆ.

ಅಮರೇಶ ನುಗಡೋಣಿಯವರು ಹೈದರಾಬಾದ್ ಕರ್ನಾಟಕ ಭಾಗದ ಪ್ರಮುಖ ಪ್ರಾತಿನಿಧಿಕ ಕಥೆಗಾರರು. ರಾಯಚೂರು ಜಿಲ್ಲೆಯ ಹಳ್ಳಿಗಳ ಜನರ ಬದುಕನ್ನು ಅತ್ಯಂತ ಮನೋಜ್ಞವಾಗಿ ಚಿತ್ರಿಸುತ್ತಾರೆ. ಜೊತೆಗೆ ಹಳ್ಳಿ ಬದುಕು ಕಥೆಗಳಲ್ಲಿ ಹಾಸುಹೊಕ್ಕಾಗಿದೆ. ಹಳ್ಳಿಗಳಲ್ಲಿ ಒಂದಾಗಿ ಬೆರೆತು ಅವರ ನಾಲಗೆಯ ಮೇಲೆ ನಲಿವ ದಿನ ನಿತ್ಯದ ನಾಡು ನುಡಿಗಳನ್ನೇ ಯಥಾವತ್ತಾಗಿ ಅಭಿವ್ಯಕ್ತಿಸಿರುವುದು ವಿಶೇಷ.

**ಗಾದೆಗಳು :** ಗಾದೆಗಳು ಪೂರ್ವಜರ ಅನುಭವ ಜನ್ಯವಾದ ರೂಢಿಗತ ಮಾರ್ಗಗಳು. ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲೂ ವಿಶಿಷ್ಟ ಅರ್ಥಪೂರ್ಣ ಸಾರ್ವಕಾಲಿಕ ಸತ್ಯಗಳಂತಿರುವ ಗಾದೆಗಳಿವೆ. ಅವುಗಳ ಸೊಗಡನ್ನು ಲೇಖಕರು ಕಥೆಯಲ್ಲಿ ಸಾಂದರ್ಭಿಕವಾಗಿ ಬಳಸಿಕೊಂಡಿದ್ದಾರೆ.

"ಬಂದಂಗ ಹೋದ್ರ ಬಂಧನ ಇಲ್ಲ" (ತಮಂಧದಕೇಡು)

"ಎಲ್ಲಿ ಉರಿವಕೊಳ್ಳಿ ಅಲ್ಲೇ ಉರಿದ್ರ ಚೆಂದ!" (ತಮಂಧದಕೇಡು)

"ಬಲ್ಯಾಗ ಉರಿವಕೊಳ್ಳಿ ಒಲೆ ಬಿಟ್ಟು ಬ್ಯಾರೆ ಕಡೆ ಉರ್‍ಯಾಕ ಹತ್ತಿತಾದ್ರ ಏನಾದೀತು?" (ತಮಂಧದಕೇಡು)

"ಕಳ್ಳನ ಮನಸ್ಸು ಉಳ್ಳಗ" (ಮಣ್ಣು ಸೇರಿತು ಬೀಜ)

**ಆಚರಣೆಗಳು :** ಹೈದರಾಬಾದ್ ಕರ್ನಾಟಕದ ಭಾಗದಲ್ಲಿ ಮಾತ್ರವೇ ಆಚರಣೆಯಲ್ಲಿರುವ ವಿಶಿಷ್ಟ ಅರ್ಥಪೂರ್ಣ ಆಚರಣೆಗಳನ್ನು ಅಮರೇಶ ನುಗುಡೋಣಿಯವರು ಕಥೆಗಳಲ್ಲಿ ಪ್ರಸ್ತಾಪಿಸುತ್ತಾರೆ.

ಅವು ಯಾವುವೆಂದರೆ

೧) ಸುಂಕದ ಬುತ್ತಿ

೨) ವಾರದ ನೀರು :

ಮದುವೆಯ ನಂತರ ವರ ಹಾಗೂ ಮಧುವಿನ ಮನೆಯಲ್ಲಿ ಸಾಂಪ್ರಾದಾಯಿಕ ನೀರು ಹಾಕುವ ಪದ್ಧತಿ.

**೩) ಕರಿ ಹರಿಯುವುದು**

ಕಾರಹುಣ್ಣಿಮೆಯ ಹಬ್ಬದ ದಿನ ಹಳ್ಳಿಯ ಜಾನಪದ ಜನರೆಲ್ಲಾ ಸೇರಿ ಊರ ಮುಂದಿನ ಅಗಸಿಯ ಮುಂದೆ ವಿವಿಧ ವರ್ಣದ ಎತ್ತುಗಳನ್ನು ವೇಗವಾಗಿ ಓಡಿಸಿ ಗುರಿ ತಲುಪಿಸುವ ವಿಶಿಷ್ಟ ಸ್ಪರ್ಧೆ, ಬಿಳಿ ಎತ್ತು ಗೆದ್ದರೇ ಆ ವರ್ಷ ಜೋಳ ಹೆಚ್ಚು ಬೆಳೆಯುತ್ತವೆ ಎಂಬ ನಂಬಿಕೆ.

**೪) ಸಸಿ ಹಾಕುವುದು :**

ಕಾರಹುಣ್ಣಿಮೆಗೆ ೧೫ ದಿನ ಮುಂಚಿತವಾಗಿ ಚಿಕ್ಕಮಕ್ಕಳೆಲ್ಲಾ ಸೇರಿ ತೆಂಗಿನಕಾಯಿಯ ಖಾಲಿ ಚಿಪ್ಪಿನಲ್ಲಿ ಮಣ್ಣು ಗೊಬ್ಬರ ಸೇರಿಸಿ ಅದರಲ್ಲಿ ಜೋಳ, ಗೋಧಿ ಹಾಕಿ ನೀರು ಹಾಕಿ ಸೊಂಪಾಗಿ ಸಮೃದ್ಧವಾಗಿ ಸಸಿ ಬೆಳೆಸಿ ಕಾರಹುಣ್ಣಿಮೆ ಕರಿಯ ದಿವಸ ಸಸಿಯನ್ನು ತಗೊಂಡು ನದಿಗೊ, ಹಳ್ಳಕ್ಕೋ, ಬಾವಿಗೋ ಹಾಕಿ ಸಂಭ್ರಮಪಡುವ ಆಚರಣೆ.

೫) ಎಳ್ಳಮಸಿ ಚರಗ ಚೆಲ್ಲುವುದು

ಎಳ್ಳು ಅಮಾವಾಸ್ಯೆಯ ದಿನ ರೈತಾಪಿ ವರ್ಗದ ಜನರೆಲ್ಲಾ ಎಲ್ಲಾ ಬಗೆಯ ನೈವೇದ್ಯವನ್ನು ಹೊಲಕ್ಕೆ ತಗೊಂಡು ಹೋಗಿ ಭೂಮಿ ತಾಯಿಯನ್ನು ಪೂಜಿಸಿ, ಎಲ್ಲಾ ವಿಶೇಷ ಭಕ್ಷ್ಯ ಭೋಜ್ಯಗಳನ್ನೆಲ್ಲಾ ಒಂದೆಡೆ ಕಲೆಸಿ ಹೊಲದ ತುಂಬಾ ಚೆಲ್ಲುವುದು.

೬) ಬಾಣಂತಿಯರು ಗಂಗೆಗೆ ಬರುವುದು

ತವರು ಮನೆಯಲ್ಲಿ ಹೆಣ್ಣಿಗೆ ಹೆರಿಗೆಯಾದರೆ ಮಗುವಿಗೆ ನಾಮಕರಣದ ಸಂದರ್ಭದಲ್ಲಿ ಹೆಣ್ಣುಮಕ್ಕಳು, ಸಣ್ಣಮಕ್ಕಳೆಲ್ಲಾ ಸೇರಿ ಬಿಂದಿಗೆಯನ್ನು ಹೊತ್ತುಕೊಂಡು, ಕಳಸ ತೆಗೆದುಕೊಂಡು ನದಿಗೋ, ಬಾವಿಗೋ, ಹಳ್ಳಕ್ಕೋ ಗಂಗೆಗೆ (ಪವಿತ್ರ ನೀರು) ಹೋಗಿ ಪೂಜೆ ಸಲ್ಲಿಸಿ ನೀರು ತರುವುದು.

ಪ್ರಾದೇಶಿಕ ಪದಗಳು

ದುಮುದರಿ = ಗಳೇವು (ವ್ಯವಸಾಯ ಕಾರ್ಯಚಟುವಟಿಕೆ), ಕ್ಯಾಲ = ಲಕ್ಷ್ಯ, ಗಮನ; ಗುಡಾಣಿ = ಧಾನ್ಯ ತರುವ ಸಾಧನ, ಕಳ್ಳು ಕಕ್ಕುಲತಿ = ಪ್ರೀತಿ ವಾತ್ಸಲ್ಯ, ಬಾಜಾಪ್ತ = ನಿಶ್ಚಿತವಾಗಿ, ಕೂನ = ಪರಿಚಯ, ಕೋತಿ, ಕಬರು = ಅರಿವು, ಹೊರಸು = ಕಟ್ಟೆಬಾವಡಿ, ವಜ್ಯ = ಭಾರ, ಉಮೇದಿ = ಉತ್ಸಾಹ, ಪೆಡಸು = ಕಷ್ಟ, ಮಸಾರಿ ಹೊಲ = ಎರೆಭೂಮಿ, ಹರತಾಳ = ಮತ್ಸರ, ಜಾಮು = ಲೋಟ, ಜಂತೆ = ತಲೆಗೆಹಾಕಿದ ಅಡ್ಡಪಟ್ಟಿ, ದೀಗಿ = ದೀಪ, ಸೆಡವು = ಬಿಡುವು, ಹಲಬಿ = ವ್ಯಥೆ.

ಹೀಗೆ ನುಗುಡೋಣಿಯವರು ತಮ್ಮ ಕಥೆಗಳಲ್ಲಿ ಪ್ರಾದೇಶಿಕತೆಯ ಸೊಗಡನ್ನು ಸಾಂದರ್ಭಿಕವಾಗಿ ಬಳಸುತ್ತಾರೆ. ಪ್ರಾದೇಶಿಕ ದಿನಬಳಕೆಯ ವಸ್ತು, ಕೃಷಿ, ಸಾಮಗ್ರಿಗಳು, ಪಡೆನುಡಿಗಳು, ಗಾದೆಗಳು ಸಂದರ್ಭಕ್ಕೆತಕ್ಕಂತೆ ಔಚಿತ್ಯಪೂರ್ಣವಾಗಿ ಬಳಸಿರುವುದು ಪ್ರಾದೇಶಿಕತೆಯ ಜೀವಂತಿಕೆಗೆ ಸಾಕ್ಷಿಯಾಗಿದೆ. ನುಗುಡೋಣಿಯವರ ಕಥೆಗಳಲ್ಲಿ ಬಹುತೇಕವಾಗಿ ಹಳ್ಳಿಯ ಸಂಸ್ಕೃತಿಯೇ ಅನುರಣಿಸಿದೆ. ಪಾತ್ರಗಳೂ ಸಹ ಅಷ್ಟೇ ಹಳ್ಳಿಯ ನೆಲ-ಜಲದೊಡನೆ ಕಳ್ಳು-ಬಳ್ಳಿಯ ಸಂಬಂಧ ಹೊಂದಿದೆ. ನಗರದ ಬದುಕಿಗೆ ಹೊಂದಿಕೊಳ್ಳಲು ತಡಕಾಡಿ ಮತ್ತೆ ಹಳ್ಳಿ ಪರಿಸರದ ಗೂಡಿಗೆ ಮರಳುವ ಸನ್ನಿವೇಶಗಳು ಕಥೆಗಳಲ್ಲಿ ಕಂಡುಬರುತ್ತವೆ. ಪಾತ್ರಗಳು ಹಳ್ಳಿಯೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿವೆ.

**'ತಮಂಧದ ಕೇಡು'** ಕಥೆಯಲ್ಲಿ ದುರುಗ ತನ್ನ ಮಗ ಚೆನ್ನ ನೆಲೆಸಿರುವ ರಾಯಚೂರು ನಗರಕ್ಕೆ ಹೋದರೂ ಸಹ ನಗರದ ಪರಿಸರದಲ್ಲಿ ದುರುಗನಿಗೆ ಏಕಾಕಿತನ ಅನಾಥಪ್ರಜ್ಞೆ ಕಾಡುತ್ತದೆ. ನಗರ ಪರಿಸರಕ್ಕೆ ದುರುಗ ಹೊಂದಿಕೊಳ್ಳಲು ತುಂಬಾ ಒದ್ದಾಡುತ್ತಾನೆ. ಭೌತಿಕವಾಗಿ ಆತ ರಾಯಚೂರು

ನಗರಕ್ಕೆ ಹೋದರೂ ಸಹ ಆತನ ಮನಸ್ಸು ಮಾತ್ರ ಹಳ್ಳಿಯತ್ತಲೇ ಹೊರಳುತ್ತದೆ. ಕೊನೆಗೆ ದುರಗನೇ ಚೆನ್ನಮಲ್ಲಯ್ಯನನ್ನುದ್ದೇಶಿಸಿ "ಚೆನ್ನಮಲ್ಲಯ್ಯ ನಾ ಊರಿಗೆ ಹೋಗ್ತೀನಿ ನೀನು ತಣ್ಣೀರು ನನ್ಗ ಆ ಊರು. ಆ ತುಂಗಮ್ಮನ ನೀರು ಶಾಂತಗೌಡನ ಸೂಗಪ್ಪ ಮಾಸ್ತರನ ಬಿಟ್ಟಿರಾಕ ಒಲ್ಲೆ ಅನಿಸ್ತದ' ಅಂತ ಹೇಳಿ ಓಡಿ ಬಂದಿದ್ದ. ಊರಿಗೆ ಬಂದು ನಿಂತಾಗಲೇ ದುರುಗನಿಗೆ ಸಲೀಸಾಗಿ ಉಸಿರಾಡಿತ್ತು." ಹೀಗೆ ದುರುಗನಂತಹ ಹಳ್ಳಿಯ ಮುಗ್ಧ ಹಿರಿಯ ಜೀವಗಳಿಗೆ ಸ್ವಾತಂತ್ರ್ಯಕ್ಕಿಂತ ಗುಲಾಮಗಿರಿಯೇ ಆಪ್ಯಾಯಮಾನವಾಗಿ ಕಾಣುತ್ತದೆ. ಚೆನ್ನನಂತಹ ಯುವ ಸಮುದಾಯ ನಗರದತ್ತಾ, ಹೊಸಹೊಸ ಸಾಧ್ಯತೆಗಳತ್ತ ಮುಖಮಾಡಿದರೆ ಅದೇ ದುರುಗನಂತಹ ಹಳೆಯ ತಲೆಮಾರುಗಳ ಜನ ಹಳ್ಳಿಯ ಬದುಕಲ್ಲೇ ಆನಂದವನ್ನು ಕಾಣುವ ಅಲ್ಪತೃಪ್ತರು. ಹಳ್ಳಿಗಳಲ್ಲಿ ಶೋಷಣೆ, ನೋವು, ನಿರಾಸೆ ಏನೇ ಇರಲಿ ಹಳ್ಳಿಯನ್ನು ಬಿಟ್ಟು ಬೇರೆ ಬದುಕನ್ನು ಕಲ್ಪಿಸಿಕೊಳ್ಳಲು ಅವರಿಂದ ಆಗದು. ಅಂಬೇಡ್ಕರರು ದಲಿತರನ್ನು, ಬಡವರನ್ನು ಸುಧಾರಿಸಲು "ಹಳ್ಳಿಗಳು ಜಾತೀಯತೆಯ ಬಿಲಗಳು, ದಲಿತರೇ ಹಳ್ಳಿಗಳನ್ನು ಬಿಟ್ಟು ಬನ್ನಿ" ಅಂತ ಕರೆಕೊಟ್ಟರೂ ಸಹ ದಲಿತರು ಇಂದಿಗೂ ಹಳ್ಳಿಯ ಬದುಕನ್ನೇ ಅಪ್ಪಿಕೊಂಡಿದ್ದಾರೆ.

'ದಾಳಿ ನಡೆದಾವೋ ಅಣ್ಣಾ' ಕಥೆಯಲ್ಲಿ ಲೇಖಕರಿಗೆ ಪ್ರಾದೇಶಿಕ ಪ್ರೀತಿ ಎಷ್ಟೊಂದು ಉತ್ಕಟವಾಗಿ, ಗಾಢವಾಗಿ ಆವರಿಸಿದೆ ಎಂಬುದು ಮನದಟ್ಟಾಗುತ್ತದೆ. ಬಯಲುಸೀಮೆಯ ಸುಂದರ ಮನೋಹರ ಪ್ರಕೃತಿಯ ತಾಣ ಶಿವನಕೊಳ್ಳ ಪ್ರದೇಶವನ್ನು ಬಹು ಸೊಗಸಾಗಿ ಬಣ್ಣಿಸುತ್ತಾರೆ.

"ಎಂಥ ಚೆಂದದ ಶಿವನಕೊಳ್ಳ ಅದು! ಎಡಬಲಕ್ಕೆ ಹಬ್ಬಿರುವ ಬೆಟ್ಟಗಳ ನಡುವೆ ಜೋಗುಳದಲ್ಲಿ ಹರಿಯುವ ಹಳ್ಳ, ದಂಡಗುಂಟ ಕಾಡಿನಂತೆ ಬೆಳೆದ ಮರಗಳು ಬೆಳ್ಳನೆಯ ಉಸುಕಿನ ಹಾಸು, ತಿಳಿನೀರಿನ ಹರಿವು. ಹಕ್ಕಿಪಕ್ಷಿಗಳ ಸಂಸಾರ, ಹಳ್ಳದಲ್ಲಿ ನಡುನಡುವೆ ಸಣ್ಣ ಸಣ್ಣ ದಿಬ್ಬಗಳು ಚೆಲುವಿನ ನೆಲೆಯಾದ ಅಲ್ಲಿ ಶಿವಪಾರ್ವತಿ ಕೈಲಾಸದಿಂದ ಬಂದು ಕಾಲಕಳೆಯುತ್ತಿದ್ದಂತೆ ಅದನ್ನು ಕಂಡು ಶಿವ ಪಾರ್ವತಿಯರ ಮಗ ಕುಮಾರಸ್ವಾಮಿ ಮರಳಿ. ಕೈಲಾಸಕ್ಕೆ ಹೋಗದೆ ಈ ಸರಹದ್ದಿನ ಬೆಟ್ಟವೊಂದರಲ್ಲಿ ನೆಲೆನಿಂತನಂತೆ" ಎಂದು ದಾಳಿ ನಡೆದಾವೋ ಅಣ್ಣಾ ಕತೆಯಿಂದ ಉದಾಹರಿಸಬಹುದು. ಪೌರಾಣಿಕ ಹಿನ್ನೆಲೆಯನ್ನು ಅಷ್ಟಕ್ಕೆ ನಿಲ್ಲದೇ ಲೇಖಕರ ಪುರಾತನ ನಂಬಿಕೆ, ಐತಿಹ್ಯಗಳನ್ನ ಹೇಳುತ್ತಾರೆ. "ವನವಾಸಕ್ಕೆಂದು ಬಂದ ರಾಮ ಲಕ್ಷ್ಮಣ, ಹನುಮಂತ ಈಕೊಳ್ಳ ಕಂಡು ಇಲ್ಲೇ ಕಾಲ ಕಳೆದರಂತೆ, ಪಾಂಡವರೂ ಬಂದು ಇಲ್ಲೇ ತಂಗಿದ್ದರು" ಎಂದು ಹೇಳುತ್ತಾರೆ. ಶಿವನಕೊಳ್ಳದ ಬಗ್ಗೆ ಲೇಖಕರಿಗೆ ಎಷ್ಟೇ ವರ್ಣಿಸಿದರೂ ಅವರ ಮನದಣಿಯದು.

ಹಳ್ಳಿಯ ಜನರು ಮತ್ತು ಶಿವನಕೊಳ್ಳದ ನಡುವೆ ಇರುವ ಭಾವನಾತ್ಮಕ ಸಂಬಂಧವನ್ನು ಲೇಖಕರು ಹೀಗೆ ಹೇಳುತ್ತಾರೆ. "ಊರಿನ ಜನರಿಗೆ ಶಿವನಕೊಳ್ಳ ಉಸಿರಾಗಿತ್ತು. ಕಾರಹುಣ್ಣಿಮೆಗೆ ಕರಿ

ಪರಿಯುವುದೇ ಶಿವನಕೊಳ್ಳದಲ್ಲಿ. ಸಸಿ ಹಾಕಿ ಚಿಕ್ಕೋರು ಸುಗ್ಗಿಯನ್ನು ಕರೆಯುವುದೇ ಈ ಶಿವನಕೊಳ್ಳದಲ್ಲಿ. ಮಣ್ಣೆತ್ತಿನ ಅಮಾವಾಸ್ಯೆಯ ದಿನ ಚಿಕ್ಕೋರು ಎತ್ತುಗಳನ್ನು ಪೂಜಿಸಿ ನೀರಿಗೆ ಬಿಡುವುದೇ ಶಿವನಕೊಳ್ಳದಲ್ಲಿ. ಬಾಣಂತಿಯರು ಗಂಗೆಗೆ ಬರುವುದು, ಮದುವೆಯಾದ ವಧು–ವರರು ವಾರದ ನೀರಿಗೆ ಬರುವುದು, ಶಿವನಕೊಳ್ಳಕ್ಕೆ, ಎಳ್ಳಮಸಿ ದಿನ ಚರಗಚೆಲ್ಲಿ ಉಣ್ಣುವುದೇ ಶಿವನಕೊಳದಲ್ಲಿ. ಬೆಳೆದ ಪೈರಿನ ಐದು ಸೊಡನ್ನು ತಂದು ಬಿಡುವುದೇ ಶಿವನಕೊಳ್ಳದಲ್ಲಿ. ಒಂದೇ ಎರಡೇ ಎಲ್ಲಾ ಹಬ್ಬ ಹರಿದಿನಗಳು ನಡೆಯುವುದೇ ಶಿವನಕೊಳ್ಳದಲ್ಲಿ."[3]

ಹೀಗೆ ಹಳ್ಳಿಯ ಜನರ ಸಾಂಸ್ಕೃತಿಕ ನಾಡಿಮಿಡಿತವಾಗಿ ಶಿವನಕೊಳ್ಳ ನಿರೂಪಿತವಾಗಿದೆ. ಶಿವನಕೊಳ್ಳದೊಡನೆ ಜನರ ಬದುಕು ಬೆಸೆದುಕೊಂಡಿದೆ. ಹೀಗೆ "ಶಿವನಕೊಳ್ಳ" ಪ್ರದೇಶದ ಪೌರಾಣಿಕ, ಐತಿಹಾಸಿಕ, ಸಾಂಸ್ಕೃತಿಕ ಭವ್ಯತೆ ಶ್ರೇಷ್ಠತೆಯನ್ನು ಹೇಳುತ್ತಾರೆ. ಒಂದು ಪ್ರದೇಶದೊಂದಿಗೆ ಜನಸಮುದಾಯದ ನಂಟು ಹೇಗೆ ಬೆಸೆದಿದೆ ಎಂಬುದರ ಚಿತ್ರಣ ಕಾಣಬಹುದು. "ಶಿವನಕೊಳ್ಳ ಜನರ ಉಸಿರೇ ಆಗಿತ್ತು" ಎಂಬ ಒಂದೇ ಒಂದು ಮಾತು ಸಾಕು. ಪ್ರಾದೇಶಿಕತೆ ಎಂಬುದು ಜನರ ಬದುಕಲ್ಲಿ ಹೇಗೆ ಹಾಸುಹೊಕ್ಕಾಗಿತ್ತು ಎಂಬುದನ್ನು ತಿಳಿಸುತ್ತದೆ.

ಮನುಷ್ಯರ ಸ್ವಾರ್ಥ, ದುರಾಸೆಯಿಂದ ಶಿವನಕ್ಕೊಳ ಮುಂದೆ ಗಣಿಗಾರಿಕೆಯಿಂದ ವಿರೂಪಗೊಂಡು ಹೇಗೆ ಸಂಪೂರ್ಣವಾಗಿ ಹಾಳಾಯಿತು ಎಂಬುದನ್ನು ಕಣ್ಣಾರೆ ಕಂಡು ದುಃಖಿಸುವ ಮಲ್ಲಯ್ಯನ ಸಂಕಟ ಲೇಖಕರ ಸಂಕಟವೂ ಆಗಿದೆ. ಆರ್ಥಿಕ ಸ್ಥಿತ್ಯಂತರ ಸಿಲುಕಿದ ಶಿವನಕೊಳ್ಳದ ಅವನತಿಯೊಂದಿಗೆ ಇಡೀ ಒಂದು ಸಮುದಾಯದ ಜೀವವೈವಿಧ್ಯತೆ, ಸಂಸ್ಕೃತಿ ಹೇಗೆ ಹಾಳಾಯಿತು ಎಂದು ಲೇಖಕರು ಹೃದಯಸ್ಪರ್ಶಿಯಾಗಿ ನಿರೂಪಿಸುತ್ತಾರೆ. "ಏ ದಿಲ್ ಮಾಂಗೇ ಮೋರ್" ಕಥೆಯಲ್ಲಿ ಆಧುನಿಕತೆ, ಜಾಗತೀಕರಣ, ಹಳ್ಳಿಯನ್ನು ಪ್ರವೇಶಿಸಿದಾಗ ಹಳ್ಳಿ ಅದಕ್ಕೆ ಹೇಗೆ ಪ್ರತಿಸ್ಪಂದಿಸಿತು ಎಂಬ ಸಂದಿಗ್ಧತೆ ತಲ್ಲಣಗಳನ್ನು ದಾಖಲಿಸುತ್ತಾರೆ. ಎಲ್ಲಾ ವಿಷಮತೆಗಳ ನಡುವೆ ಮನುಷ್ಯ ಸಂಬಂಧಗಳು ಇನ್ನೂ ಹಳ್ಳಿಗಳಲ್ಲಿ ಉಸಿರಾಡುತ್ತವೆ ಎಂಬುದನ್ನು ಸಮಾಧಾನಕರ ಸಂಗತಿಯಾಗಿದೆ.

ಅಮರೇಶನುಗಡೋಣಿ ಅವರಿಗೆ ಜನಪದ ಸಂಸ್ಕೃತಿಯಲ್ಲಿ ಆದ ಬದಲಾವಣೆ ಎಷ್ಟು ಮುಖ್ಯವೋ ಉಳಿದ ಸಂಸ್ಕೃತಿಗಳಲ್ಲಾದ ಬದಲಾವಣೆಗಳೂ ಅಷ್ಟೇ ಮುಖ್ಯವಾಗಿಯೇ ಕಾಣಿಸುತ್ತವೆ. ಅವೆಲ್ಲಕ್ಕಿಂತ ಪ್ರಧಾನವಾಗಿ ಕೌಟುಂಬಿಕ ನೆಲೆಯ ತಲ್ಲಣಗಳನ್ನು ಹೇಳುತ್ತಲೇ ನೆಲೆಯಲ್ಲಿ ಪ್ರಾದೇಶಿಕ ಸಂಸ್ಕೃತಿಯ ಮೇಲಾಗುತ್ತಿರುವ ಆಕ್ರಮಣಗಳನ್ನು ಅತ್ಯಂತ ಸೂಕ್ಷ್ಮವಾಗಿ ಅನಾವರಣಗೊಳಿಸುವುದೂ ಆ ಮುಖೇನ ಜಾಗೃತಿಯ ಪಂತವನ್ನು ತಲುಪಿಸುವುದು ಇವರ ಕಥೆಗಳ ಮುಖ್ಯ ಆಶಯ ಎನ್ನಬಹುದು.

"ಅಮರೇಶ ನುಗಡೋಣಿಯವರ ಒಂದು ನಿರ್ದಿಷ್ಟ ಜೀವನ ಕ್ರಮದಲ್ಲಿ ಬದುಕುತ್ತಿರುವ ವ್ಯಕ್ತಿಗಳ ನೋವು ನಲಿವುಗಳನ್ನು ಅವರ ಭಾಷೆ ನುಡಿಗಟ್ಟುಗಳಲ್ಲಿಯೇ ಗ್ರಹಿಸಿ ನಿರೂಪಿಸುವ ನುಗಡೋಣಿ ಪರ್ಯಾಯವಾಗಿ ಒಂದು ಪ್ರದೇಶದ ಸಂಸ್ಕೃತಿಯನ್ನು ಪ್ರತಿಫಲಿಸುವ ಮೂಲಕ ತಮ್ಮ ಕಥೆಗಳ ವ್ಯಾಪ್ತಿಯನ್ನು ಹಿಗ್ಗಿಸಿ ಕೊಂಡಿದ್ದಾರೆ. ಒಂದು ಜೀವನ ಕ್ರಮವು ಮನುಷ್ಯನ ವರ್ತನೆಗಳನ್ನು ಪ್ರಭಾವಿಸಿ ನಿರ್ದೇಶಿಸುವ ಹಲವು ಪ್ರಕರಣಗಳನ್ನು ಅವರು ಕಥೆಯಾಗಿಸಿ ಸಾಧಾರಣೀಕರಿಸುವ ರೀತಿಯು ಅವರ ಪ್ರಬುದ್ಧತೆಗೂ, ಕಥೆಗಾರಿಕೆಗೂ ಸಾಕ್ಷಿಯಾಗಿವೆ."[೭] ಹೀಗೆ ಅಮರೇಶರು ತಮ್ಮ ಬರಹಗಳಲ್ಲಿ ತಮ್ಮ ಪ್ರಾದೇಶಿಕ ಚಿತ್ತಾರವೆಂಬಂತೆ ಕೃತಕವಾಗಿ ತೋರಿಸಲ್ಪಡದೆ ಒಂದು ಜೀವನ ವಿನ್ಯಾಸವೆಂಬಂತೆ ಸಹಜವಾಗಿ ಕಥೆಗಳಲ್ಲಿ ಮೂಡಿಸಿದ್ದಾರೆ.

**ಅಡಿ ಟಿಪ್ಪಣಿಗಳು :**

೧. ಮನ್ನಿಸಿ ಮೂಕದಮೇಲೆ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೧೨೦

೨. ಕಥೆಗಾರನ ಹಾಡುಪಾಡು ಸವಾರಿ ಸಂಕಲನ ಮುನ್ನುಡಿ : ಪುಟ ೪

೩. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ : ಪುಟ ೧೧

೪. ದಾಳಿ ನಡೆದಾವೋ ಅಣ್ಣಾ, ಮುಸ್ಸಂಜೆ ಕಥಾನಕಗಳು ಸಂಕಲನ : ಪುಟ ೩೮

೫. ಅದೇ ಪುಟ

೬. ಅದೇ ಪುಟ

೭. ಟಿ.ಪಿ. ಅಶೋಕರ ಲೇಖನ ಗ್ರಾಮ ಸಮುದಾಯದ ಭೂತ, ವರ್ತಮಾನ, ಭವಿಷ್ಯ ಲೇಖನ . ವಿಜಯ ಕರ್ನಾಟಕ ಪತ್ರಿಕೆ (ಸಾಪ್ತಾಹಿಕ ವಿಜಯ) ದಿನಾಂಕ ೨೪-೪-೨೦೦೯

ಅಧ್ಯಾಯ – ೫

# ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಪಾತ್ರ ವಿಶೇಷತೆ

ಕಥೆ, ಕಾದಂಬರಿ, ನಾಟಕಗಳಲ್ಲಿ ಪಾತ್ರಗಳು ಬಹುಮುಖ್ಯ ಅಂಗದಂತೆ ಕಂಡುಬರುತ್ತವೆ. ಲೇಖಕನ ಸ್ಮೃತಿಪಟಲದಿಂದ ಮೂಡಿಬಂದ ಕಲ್ಪನೆಗಳ ಮೂರ್ತ ರೂಪವೇ ಪಾತ್ರಗಳಾಗಿ ಹೊರಹೊಮ್ಮುತ್ತವೇ. ಹಾಗೇ ಇಡೀ ಕಥೆಯನ್ನೇ ಸಮರ್ಥವಾಗಿ ಹಿಡಿದಿಟ್ಟುಕೊಂಡಿರುತ್ತವೆ. ಸಣ್ಣ ಕಥಾ ಸಾಹಿತ್ಯದಲ್ಲಿ ಒಂದು ಕೇಂದ್ರ ಪಾತ್ರಕ್ಕೆ ಅನುಗುಣವಾಗಿ ಇತರ ಪಾತ್ರಗಳು ದುಡಿಯುತ್ತವೆ. ಕೆಲವು ಕಥೆಗಳಲ್ಲಿ ಪ್ರಸಂಗ ನಗಣ್ಯವಾಗಿ ಪಾತ್ರಗಳೇ ವಿಜೃಂಭಿಸಿದರೆ, ಇನ್ನೂ ಕೆಲವು ಪಾತ್ರಗಳಿಗಿಂತ ಪ್ರಸಂಗಗಳೇ ಪ್ರಾಮುಖ್ಯತೆ ಪಡೆದಿರುತ್ತವೆ.

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಶೋಷಣೆಯ ಬೆಂಕಿಯಲ್ಲಿ ನಲುಗಿದ ಜೀವಗಳಾಗಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ, ನವ್ಯ, ಪ್ರಗತಿಶೀಲ ಮತ್ತು ದಲಿತ ಬಂಡಾಯ ಹೀಗೆ ಲೇಖಕರು ಅವರವರ ಮನೋಧರ್ಮ ಬದ್ಧತೆಗಳಿಗೆ ಅನುಗುಣವಾಗಿ ಪಾತ್ರಗಳನ್ನು ಸೃಜಿಸಿ ಕಥಾ ಹಂದರ ಹೆಣೆಯುತ್ತಾರೆ. ದಲಿತ ಬಂಡಾಯ ಕಥೆಗಳ ಪಾತ್ರಗಳು ಹಸಿವು, ಬಡತನ, ನಿರಾಸೆ, ದುಃಖಿತಪ್ತತೆ, ಶೋಷಣೆಗಳಿಂದ ಸೋತು ಸುಣ್ಣಾಗಿರುವ ದಯನೀಯ ಸ್ಥಿತಿಯಿಂದ ಕೂಡಿರುತ್ತವೆ. 'ನಮ್ಮ ಸ್ಥಿತಿಗೆ ನೀವೇ ಕಾರಣ' ಎಂದು ದಲಿತ ಕಥೆಗಳ ಪಾತ್ರಗಳು ಮೇಲ್ವರ್ಗಕ್ಕೆ ಪರಿಣಾಮಕಾರಿಯಾದ ಸಂದೇಶ ರವಾನಿಸುತ್ತವೆ. ದಲಿತರ ಅನುಭವವನ್ನು ದಲಿತ ಬದುಕಿನಿಂದಲೇ ಸ್ವತಃ ಅನುಭವಿಸಿ ನೈಜವಾಗಿ ಕಥಾ ಸಾಹಿತ್ಯದಲ್ಲಿ ಪ್ರಸ್ತುತಪಡಿಸುವವರಲ್ಲಿ ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಚನ್ನಣ್ಣವಾಲೀಕರ, ಕಾಳೇಗೌಡನಾಗವರ ಮುಂತಾದ ಅಗ್ರಗಣ್ಯರು.

ನುಗಡೋಣಿಯವರು ಪಾತ್ರಗಳ ಮೂಲಕವೇ ಬಂಡಾಯ ಸ್ವರೂಪ ತಿಳಿಸುತ್ತಾರೆ. ಕೆಲವು ಪಾತ್ರಗಳು ಬಂದೂಕನ್ನು ಕೈಗೆತ್ತಿಕೊಂಡು ವ್ಯವಸ್ಥೆ ವಿರುದ್ಧ ಸಿಡಿದಿದ್ದರೆ ಇನ್ನೂ ಕೆಲವು ಪಾತ್ರಗಳು ತಣ್ಣನೆಯ ಪ್ರತಿಭಟನೆ ನಡೆಸುತ್ತವೆ. ಹಸಿವಿನ ತೀವ್ರತೆ ಹೆಚ್ಚಾಗಿ ಕಂಡುಬರದಿದ್ದರೂ ಸಹ ಹೋರಾಟದ ಬದುಕಿನ ಚಿತ್ರಣವನ್ನು ಕಾಣಬಹುದು. ಆರ್ಥಿಕ ಅಸಮಾನತೆಯಿಂದ ಉಂಟಾದ ಸಮಸ್ಯೆಗಳಿಂದಾಗಿ ಪಾತ್ರಗಳು ಹೋರಾಟದ ಹಾದಿ ಹಿಡಿಯುತ್ತವೆ.

ಪಾತ್ರಗಳು ದಲಿತ ಕೇರಿಯೊಳಗಿನಿಂದಲೇ ಬೆಳೆದು ಬಂದವುಗಳಾಗಿವೆ. ದಲಿತರ ಯಥಾವತ್ತಾದ ಬದುಕನ್ನು ಪ್ರತಿನಿಧಿಸುತ್ತವೆ. ಪಾತ್ರಗಳು ನೋವಲ್ಲಿ ನೊಂದರೂ, ಬೆಂದರೂ ಅದಮ್ಯವಾದ ಜೀವನ

ಪ್ರೀತಿಯಿಂದ ಅರಳುತ್ತವೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕ ಸೌಲಭ್ಯಗಳಿಂದ ವಂಚಿತವಾಗಿ ಮೇಲ್ವರ್ಗದಿಂದ ಶಾಶ್ವತವಾಗಿ ತುಳಿತಕ್ಕೊಳಪಟ್ಟ ಬಡಜನರೇ ನುಗಡೋಣಿಯವರ ಕಥೆಗಳ ನಾಯಕರು.

ರಹಮತ್ ತರಿಕೇರೆಯವರು 'ಹೈದ್ರಾಬಾದ್ ಕರ್ನಾಟಕದ ಫ್ಯೂಡಲ್ ವ್ಯವಸ್ಥೆಯ ಉಸಿರುಗಟ್ಟಿಸುವ ಬದುಕಿನಲ್ಲೂ, ಒತ್ತಡಗಳ ಮಧ್ಯೆಯೂ ಜೀವಗಳು (ಪಾತ್ರಗಳು) ಉಸಿರಾಡುತ್ತವೆ. ತಮ್ಮೆದುರಿನ ವಾಸ್ತವವನ್ನು ಮುಖಬೆಲೆ ಮಾಡುತ್ತವೆ. ಪ್ರತಿ ಶಕ್ತಿಗಳಾಗಿ ಬೆಳೆಯುತ್ತವೆ' ಎಂದು ಹೇಳುತ್ತಾರೆ.[೧]

"ನಮ್ಮ ದೇಶದ ಯಾವುದೇ ಹಳ್ಳಿಯಲ್ಲಿರಬಹುದಾದ ಹೆಂಗಸರು, ಮಕ್ಕಳು, ಮುದುಕರು, ಮುದುಕಿಯರು, ರೋಗಿಗಳು, ದಲಿತರು, ಜಾತಿ ವಾದಿಗಳು, ಅಮರೇಶ್ ನುಗಡೋಣಿಯವರ ಕಥೆಗಳಲ್ಲಿ ಕಂಡುಬರುತ್ತಾರೆ. ಅವರ ಕಥೆಗಳು ಯಾವುದೇ ಬಗೆಯ ಕಳನಾಯಕರನ್ನು ತಾತ್ವಿಕವಾಗಿ ನಿರಾಕರಿಸುತ್ತವೆ ಎಂದು ಪುರುಷೋತ್ತಮ ಬಿಳಿಮಲೆಯವರು ಹೇಳಿರುತ್ತಾರೆ."[೨]

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಪಾತ್ರಗಳನ್ನು ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ.

೧) ಪುರುಷ ಪಾತ್ರಗಳು



೨) ಸ್ತ್ರೀ ಪಾತ್ರಗಳು

**೧) ಪುರುಷ ಪಾತ್ರಗಳು :** ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಬರುವ ಕೆಲವು ಪುರುಷ ಪಾತ್ರಗಳು ಫ್ಯೂಡಲ್ ವ್ಯವಸ್ಥೆಯ ಪ್ರತಿನಿಧಿಗಳಾದ ಶಾಂತಗೌಡ, ದೊಡ್ಡನಗೌಡ, ಮಲ್ಲನಗೌಡ, ಶರಬನಗೌಡ, ಕರಿಗೌಡ, ದಲಿತರನ್ನು ನಿರಂತರವಾಗಿ ಶೋಷಿಸುತ್ತಲೇ ಅವರ ಬದುಕನ್ನು ನುಂಗಿ ನೀರು ಕುಡಿಯುತ್ತಾರೆ. ಇನ್ನು ಕೆಲವು ಪಾತ್ರಗಳು ಚೆನ್ನ, ಚಂದ್ರಪ್ಪ, ಸಿದ್ದಪ್ಪ, ಖಜಾವಾಲಿ, ಮೋನಿಯಂತಹ ಪಾತ್ರಗಳು ಪ್ರಗತಿಪರ ಚಿಂತನೆಗಳತ್ತ ಚಲಿಸಿದರೆ ದುರುಗ, ಜಂಬಣ್ಣ, ವಜ್ರಪ್ಪ, ಕೆಂಪುಗನಂತಹ ಪಾತ್ರಗಳು ಯಾವುದೇ ಬದಲಾವಣೆ ಕಾಣದೆ ನಿಶ್ಚಲತೆಯಲ್ಲೇ ಸಂತೃಪ್ತಿಯನ್ನು ಕಾಣುತ್ತವೆ. ಮಾದಪ್ಪ ಹರಿಶ್ಚಂದ್ರನಂತಹ ಪಾತ್ರಗಳು ಬದಲಾವಣೆಯತ್ತ ತುಳಿಯುತ್ತಲೇ ಕೊನೆಗೆ ಸೋತು ದಾರಿಕಾಣದೆ ವ್ಯವಸ್ಥೆಯನ್ನು ಒಪ್ಪಿಕೊಂಡು ವ್ಯವಸ್ಥೆಯಲ್ಲೇ ಒಂದಾಗಿ ಬಿಡುತ್ತವೆ.

**ದೊಡ್ಡನಗೌಡ :**

ಈತ 'ಹೊತ್ತು ಮೂಡುವ ಸಮಯ' ಕಥೆಯಲ್ಲಿ ಅತ್ಯಂತ ಕ್ರೂರಿಯಾಗಿ ಮೃಗೀಯ ಸ್ವಭಾವದ ಜಮೀನ್ದಾರನ ವರ್ತನೆ ಅಮಾನವೀಯವಾಗಿ ಕಂಡುಬರುತ್ತದೆ. ತಾನು ಏನೂ ಮಾಡಿದರು ಸರಿ ಆದರೆ ಬೇರೆಯವರು ಅದನ್ನು ಮಾಡಿದರೆ ಕೆರಳಿ ಕೆಂಡವಾಗುತ್ತಾನೆ. ತನ್ನ ನಿವೀರ್ಯ ಸ್ಥಿತಿಯಿಂದ

ಬೇಸತ್ತ 'ಅಕ್ಕಮ್ಮ' ಈತನಿಗೆ ಮೂರನೇ ಹೆಂಡತಿ. ಈತನ ಮೂರು ಜನ ಹೆಂಡತಿರ‍್ಯಾರಿಗೂ ಮಕ್ಕಳಾಗಿರುವುದಿಲ್ಲ. ಇದರಿಂದ ಬೇಸತ್ತ ಅಕ್ಕಮ್ಮ ಕೆಳಜಾತಿಯ ಪರಪುರುಷ 'ಮಾದರಲಿಂಗ'ನ ಜೊತೆ ಸಂಬಂಧ ಬೆಳೆಸುತ್ತಾಳೆ. ಇದನ್ನು ಮನಗಂಡ ದೊಡ್ಡನಗೌಡ ಲಿಂಗನನ್ನು "ಲೇ ಜಾತಿಗೇಡಿ.... ನಿನ್ನ ಮ್ಯಾಲೆ ನನ್ನ ಕಣ್ಣಿತ್ತು!' ಎಂದು ಒದ್ದು ಲಿಂಗನ ಕೂದಲಿಡಿದೆಳೆದು ಕಟ್ಟಿ ಇವುನ್ನ ಕಣಕ್ಕೆ ತಗಂಡು ನಡಿರಲೆ" ಎಂದು ಆಳುಗಳಿಂದ ಲಿಂಗನನ್ನು ಮುಗಿಸುತ್ತಾನೆ. "ಒಕ್ಕಲುತನದ ಬೆನ್ನೆಲುಬಾಗಿದ್ದ 'ಸೂರ್ಯ' ಎಂಬ ಎತ್ತನ್ನು ಒಣಸೊಪ್ಪೆ (ವಿಷದ ಸಸ್ಯ) ತರಿಸಿ ಸೂರ್ಯನ ಮೇಲೆ ಒಟ್ಟಿಸಿಟ್ಟು ಬೆಂಕಿ ಹಚ್ಚಿಬಿಟ್ಟ! ಗಳಿಗೆತ್ತಿನಲ್ಲಿ ಸೂರ್ಯ ಬೆಂಕಿಯಲ್ಲಿ ಉರಿದು ಹೋಯಿತು. ದೊಡ್ಡನಗೌಡ ತನ್ನ ಸಿಟ್ಟನ್ನು ತಮಣಿಸಿಕೊಂಡ. ಎರಡೂರು ನಿಂತು ಉರಿಯುವ ಸೂರ್ಯನನ್ನು ನೋಡಿ ಕಣ್ಣೀರಿಟ್ಟತೇ ಹೊರತು ಗೌಡನನ್ನು ತಡೆಯಲಿಲ್ಲ. ಹರಿಯುವ ನೀರೂ ತಂದೂ ಆರಿಸಲಿಲ್ಲ." ಈ ರೀತಿ ಕ್ರೂರಿಯಾದ ವ್ಯಕ್ತಿ ಇನ್ನು ಮನುಷ್ಯರ ವಿಷಯದಲ್ಲಿ ಆತನ ವರ್ತನೆ ಊಹಿಸಲಾರದು. ದಬ್ಬಾಳಿಕೆ, ಮಹಿಳೆಯರ ಶೋಷಣೆ, ಬಡವರನ್ನು ನಿಕೃಷ್ಟವಾಗಿ ಕಾಣುವ ಪರಿಯನ್ನು ದೊಡ್ಡನಗೌಡ ಪಾತ್ರದ ಮೂಲಕ ಅಮರೇಶರು ಜೀವ ತುಂಬಿದ್ದಾರೆ.

**ಶಾಂತಗೌಡ :**

'ತಮಂದದ ಕೇಡು' ಕಥೆಯಲ್ಲಿ ತನ್ನನ್ನೇ ನಂಬಿದ ದುರುಗನನ್ನು ಅವನ ಸರ್ವಸ್ವವನ್ನು ಶಾಂತಗೌಡ ಕಿತ್ತುಕೊಳ್ಳುತ್ತಾನೆ. ದುರುಗ ತುಂಬಾ ಪ್ರೀತಿಯಿಂದ ಬೆಳೆಸಿದ ಗಿಡಗಳನ್ನೇ ಕಡಿದು ಕೃಷಿ ಸಾಮಾಗ್ರಿಗಳನ್ನಾಗಿ ಮಾಡಿಕೊಳ್ಳುತ್ತಾನೆ. ಅದರಿಂದ ಅಪಾರ ನೋವಾದರೂ ಸಹ ದುರುಗ ಅವನ್ನೆಲ್ಲ ಅವಡುಗಟ್ಟಿ ಸಹಿಸಿಕೊಂಡಿದ್ದ. ಇದು ಶಾಂತಗೌಡನಂತಹ ಬಲಿಷ್ಠರ ಹೃದಯಹೀನತೆಯನ್ನು ಗುರುತಿಸುತ್ತದೆ. ದುರುಗನ ಹೆಂಡತಿ ಚಂದವ್ವಳನ್ನು ತನ್ನ ಕಾಮ ತೃಷೆಗಾಗಿ ಬಳಸಿಕೊಳ್ಳುತ್ತಾನೆ. ಇಲ್ಲಿ ಅಮಾನವೀಯತೆ ನಡೆದರೂ ಕಥೆಗಾರ ಪಾತ್ರಗಳನ್ನು ರೋಷಿಸಿದರೂ ಶೋಷಣೆಯೇ ಇಲ್ಲವೆನ್ನುವಂತೆ ಚಿತ್ರಿಸಿದ್ದಾರೆ. ಶಾಂತಗೌಡನಿಗೆ ಸ್ವಂತ ಹೆಂಡತಿಗಿಂತ ದುರುಗನ ಹೆಂಡತಿಯೇ ಹಿತವೆನಿಸಿದಳು. ಶಾಂತಗೌಡ, ಚಂದವ್ವಳ ಸಂಬಂಧ ಆಕೆ ಸಾಯುವ ತನಕ ನಡೆದಿತ್ತು. ಇಂತಹ ಸಂಬಂಧ ಶ್ರೀಮಂತರು ತಾವು ಏನೂ ಮಾಡಿದರು ಸರಿ! ನೈತಿಕತೆ-ಅನೈತಿಕತೆ, ನ್ಯಾಯ-ಅನ್ಯಾಯ, ಜಾತಿ-ವಿಜಾತಿಯ ಪ್ರಶ್ನೆ ಉದ್ಭವಿಸಲಾರದು. ಆದರೆ ಪಾಪ ದುರುಗನಂತಹ ಮುಗ್ಧರು ಇಂತಹ ಸಂಬಂಧವನ್ನು ಕಣ್ಣಾರೆ ಕಂಡರೂ ಸಹ ನುಂಗಿಕೊಳ್ಳಬೇಕಾಗಿ ಬರುವುದು.

ಆದರೆ ದುರುಗನ ಮಗ ಚಂದನಿಗೆ ತನ್ನ ತಾಯಿ ಜೊತೆ ಗೌಡ ಅಕ್ರಮ ಸಂಬಂಧ ಹೊಂದಿರುವುದು ಗೊತ್ತಾದಾಗ ಆಘಾತವಾಯಿತು. ಗೌಡನ ಹೆಂಡತಿ ಹಂಪಮ್ಮನಿಗೆ ಸಹಜವಾಗಿಯೇ ಚಂದವ್ವನ ಸಂಬಂಧದ ಬಗ್ಗೆ ಮತ್ಸರವಿತ್ತು. ಅದನ್ನು ಸೂಗಪ್ಪ ಮಾಸ್ತರ್ ಸಮರ್ಥಿಸಿ ಸಮಸ್ಯೆ ಬಗೆಹರಿಸುತ್ತಾನೆ. "ಶಾಂತಗೌಡನೇನೋ

ಒಳ್ಳೆ ಮನುಷ್ಯ. ಏನೋ ಕೆಟ್ಟ ಗಳಿಗೆ ಆತನ ಹಣೆಬರದಾಗ ಅದು ಬರದಾದ ಅನಬೇಕು. ಅದಕ್ಕ ಚೆನ್ನವ್ವನ ಸವಾಸ ಮಾಡ್ಯಾನ ಆಳೋ ಗಂಡಿಗೆ ನೂರು ಹೆಣ್ಣುಗಳು' ಎಂಬಂತೆ ನೀನು ತಣ್ಣಗ ಮಸ್ಯಾಗ ಮುತ್ತೈದೆಯಾಗಿರು ಹೆಂಗೆ ನೋಡಿದ್ರ ಚಂದವ್ವ ಎಷ್ಟಿದ್ರೂ ಮನೆಯ ಹೊರಗೆ ಇರಬೇಕು"[5] ಎಂದು ಹೇಳುವುದು ದಲಿತ ಹೆಣ್ಣುಗಳ ದೈಹಿಕ ಸುಖ ಪಡೆದರೆ, ಆಸ್ತಿ ಸಾಮಾಜಿಕ ಸ್ಥಾನಮಾನಕ್ಕೆ, ಮನೆತನದ ಗೌರವಕ್ಕೆ ಯಾವುದೇ ರೀತಿಯ ತೊಂದರೆಯಾಗುವುದಿಲ್ಲ. ಆದರೆ ಕೆಳಜಾತಿಯವರೇ ಅದನ್ನು ಪ್ರತಿಭಟಿಸಿದರೆ ಅದು ತಪ್ಪು ಎನ್ನುವ ಶಾಂತಗೌಡನ ಪಾತ್ರವನ್ನು ಸುಲಲಿತವಾಗಿ ಅಮರೇಶ ನುಗಡೋಣಿಯವರು ಚಿತ್ರಿಸಿದ್ದಾರೆ. ಶಾಂತಗೌಡನ ದಬ್ಬಾಳಿಕೆ ದುರುಗನ ಮನೆಯಾಗಿರುವ ಮರಗಳನ್ನು ಕಡಿದಿರುವುದು ಮತ್ತು ತನ್ನ ಅಕ್ಕ ರುದ್ರಮ್ಮನ ಮನೆಗೆ ದುರುಗನ ಹೆಗಲ ಮೇಲೆ ಸಾಗಿಸುವುದು ಬಡವರವನ್ನು ಶೋಷಿಸುವ ಬಗೆಯನ್ನು ಶಾಂತಗೌಡನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

**ಚೆನ್ನ :**

ಈತ ತಮಂದದ ಕೇಡು ಕಥೆಯಲ್ಲಿ ದುರುಗನ ಮಗ. ಜಾತಿಯಲ್ಲಿ ಮಾದಿಗ. ನುಗಡೋಣಿಯವರ ಕಥೆಯಲ್ಲಿ ಈತನದು ವಿದ್ಯಾವಂತನ ಪಾತ್ರ. ಈತನು ರಾಯಚೂರಿನಲ್ಲಿ ಅಕ್ಕಮ್ಮನ ಶಾಲೆಯಲ್ಲಿ ಮಾಸ್ತರನಾಗಿರುವಾತ. ಅಕ್ಕಮ್ಮನನ್ನು ಪ್ರೀತಿಸಿ ಶಾಂತಗೌಡನ ನಿದ್ದೆ ಕೆಡಿಸಿರುವಾತ. ಇವನು ಶಾಂತ ಗೌಡನ ವಿರುದ್ಧ ಬಂಡಾಯದ ಪ್ರತಿಭಟನೆಯ ಧ್ವನಿ ಎತ್ತಿದ ವ್ಯಕ್ತಿ. "ಶಾಂತಗೌಡನು ದುರುಗನ ಚಂದವ್ವನ ಮೊರೆ ನೋಡಿ ಚನ್ನಗ ಓದಾಕ ಬೇಕಾದಟು ರೊಕ್ಕಕೊಟ್ಟೆ! ಎಂದಾಗ ಚನ್ನ "ನಮ್ಮಪ್ಪ ದುಡಿದಾನ ನಮ್ಮವ್ವ ದುಡುದಾಳ, ಮಾರಿಕೊಂಡಾರ, ಅವರಿಬ್ಬರು ಶಾಂತಗಾಡುಗ. ಮಾರಿಕೊಂಡದ್ದು ನೋಡಿದರೆ ಅದರ ರೊಕ್ಕ ಶಾಂತಗೌಡನ ಆಸ್ತಿನೆಲ್ಲ ಮಾರಿದರೆ ಸಾಲದು. ನಮ್ಗ ತೀರ್‍ಸಾಕ!"[6] ಅಂದಿರುವುದು ಪ್ರತಿಭಟನೆಯ ಧ್ವನಿಯಾಗಿ ಉಳ್ಳವರ ದರ್ಪವನ್ನು ಬಯಲಿಗೆಳೆಯುವ ಪ್ರಯತ್ನ ಕಂಡುಬರುತ್ತದೆ. ಕೊನೆಯಲ್ಲಿ ಶಾಂತಗೌಡನ ಅಕ್ಕ ರುದ್ರಮ್ಮ "ಈ ವಾರದಾಗ ಅವುನು ಊರಿಗೆ ಬರ್‍ತಾನ. ಕಾಯ್ದುಕೊಂಡು ನೋಡಿ ನನ್ಗ ಬಂದು ಹೇಳು. ಚೆನ್ನನ್ನ ಕರೆಸಿ, ಸಣ್ಣಾಗಿ ಕಡಿಸಿ ತುಂಗಮ್ಮನಲ್ಲಿ ಚಲ್ಲಿಸಿಬಿಡ್ತೀನಿ! ಏನಾ?"[7] ಎಂದು ರುದ್ರಮ್ಮ ಚೆನ್ನನ್ನು ಕೊಲ್ಲುವ ಆಲೋಚನೆ ಮಾಡ್ತಾಳೆ. ಹೀಗೆ ಚೆನ್ನ ಕಥೆಯಲ್ಲಿ ಬಡತನದ ನಡುವೆಯೂ ಪ್ರೀತಿ ಹಾಗೂ ವಿವೇಕಗಳನ್ನು ಜೀವಂತವಾಗಿಟ್ಟುಕೊಳ್ಳುವ ಭರವಸೆಯ ಪಾತ್ರವಾಗಿ ಕಥೆಗೆ ಜೀವ ತುಂಬಿದ್ದಾನೆ. ಇಂದಿನ ಯುವಕರ ಮನಸ್ಥಿತಿಯನ್ನು ಪ್ರತಿನಿಧಿಸುವಂತಹ ಪಾತ್ರವಾಗಿದೆ.

**ಚಂದ್ರಪ್ಪ :**

'ಪಕ್ವಕಲ್ಲದೆ ಪರಿಣಾಮ ಕಾಣಿಸಿದು' ಕಥೆಯಲ್ಲಿ ಬಂದೂಕು ಹಿಡಿದು ನಕ್ಸಲ್ ಮಾದರಿಯಲ್ಲಿ

ಹೋರಾಡಿದಾತ. ತಲತಲಾಂತರದಿಂದ ಬಡವರ ದುಡಿಯುವವರ ಆಸ್ತಿಯನ್ನು ಕಬಳಿಸುತ್ತಿರುತ್ತಾರೆ. ಇಂತಹ ಅಸಮಾನತೆಯ ವಿರುದ್ಧ ಹೋರಾಟ ಮಾಡುತ್ತಾನೆ. ಇದನ್ನು ಶರಬನಗೌಡ 'ದಂದೆ'ಯಂದು ಕರೆದರೆ ಪೋಲಿಸರು ಇವರ ಗುಂಪನ್ನು 'ಭಯೋತ್ಪಾದಕರ ಗುಂಪು' ಎಂದು ಕರೆಯುತ್ತಾರೆ. ಇದಕ್ಕೆ ಚಂದ್ರಪ್ಪ ಪ್ರತಿಯಾಗಿ "ಗೌದ್ರೆ ದಂಧೆ ಅಂತ ಅಂದು ನನ್ನ ಅವಮಾನ ಮಾಡಿದ್ದೀರಿ. ಹೋರಾಟ ಅನ್ರಿ! ಚಳುವಳಿ ಅನ್ರಿ, ಇದು ಅಸ್ತಿತ್ವ ಇಲ್ಲದ ಜನಪರ ಹೋರಾಟ, ಭೂರಹಿತರಿಗೆ ಅಸ್ತಿತ್ವ ನೀಡುವ ಚಳುವಳಿ"[25] ಎಂದು ಅರ್ಥೈಸುತ್ತಾನೆ. "ಗೌಡ, ಬಪ್ಪರೆ ಮಗನೇ! ಚಳುವಳಿ! ಹೋರಾಟ! ತಮ್ಮ ಬ್ರಿಟಿಷರನ್ನು, ರಜಾಕಾರರನ್ನು ಈ ಪ್ರಾಂತ್ಯ ದೇಶ ಬಿಟ್ಟು ಓಡಿಸುವ ಚಳುವಳಿ ಸತ್ಯಾಗ್ರಹ ಮಾಡಿದ್ದೇನು" ಎಂದಿದ್ದಕ್ಕೆ ಚಂದ್ರಪ್ಪ ಪ್ರತಿಕ್ರಿಯಿಸುತ್ತಾ ಅವರನ್ನು ಕಳಿಸಿ ಅವರ ಜಾಗದಲ್ಲಿ ನೀವು ಕುಂಡಿದ್ದೀರಿಲ್ಲ. ಗೌಡ್ರೇ ಅವರಿಗಿಂತ 'ನೀವು ಬಾಳ ಅಪಾಯ!' ಚಂದ್ರಪ್ಪ ಬಿಸಿಯಾಗಿ ಪ್ಯೂಡಲಿಸಂಗೆ ತಕ್ಕ ಉತ್ತರವನ್ನು ಕ್ರಾಂತಿಯ ಧ್ಯೇಯೋದ್ದೇಶಗಳನ್ನು ಕುರಿತು 'ಚರಿತ್ರೆಯೊಳಗೆ ಮನುಷ್ಯ ಕೇವಲ ದೈಹಿಕ ಬಲದಿಂದ ಬದುಕಿಲ್ಲ. ಸಾಮ್ರಾಜ್ಯ ಕಟ್ಟಿಲ್ಲ, ಕಟ್ಟಿದ್ದು ಈ ಬಂದೂಕಿನಿಂದ' ಎನ್ನುತ್ತಾ ನರಸನಗೌಡ ತಳವಾರ ಯಂಕಪ್ಪನನ್ನು ಕೊಂದದ್ದು ಪ್ರಸ್ತುತ ನಕ್ಸಲ್ ಚಳುವಳಿಯ ಸ್ವರೂಪದ್ದಾಗಿದೆ.

ಜಮೀನ್ದಾರರು ತಮ್ಮ ಮನೆಯಲ್ಲಿ ತಲತಲಾಂತರದಿಂದ ದುಡಿಯುವವರಿಗೆ ಅನ್ನ, ಆಹಾರ ಕೊಟ್ಟು ಸಲಹಿದರೇ ಹೊರತು ಅವರೆನ್ನೆಂದೂ ಮೇಲೆತ್ತಲೇ ಇಲ್ಲ. ಶಾಶ್ವತ ಬದುಕಿಗೊಂದಿಷ್ಟು ಭೂಮಿಯ ಅನಿವಾರ್ಯತೆಯನ್ನು "ನನ್ನ ತಾತಂದಿರಿಗೆ ನೀನು ಕೊಟ್ಟದು ಅಂಗೈ ಅಗಲದ ರೊಟ್ಟಿ,ಹಿಡಿ ಜೋಳದ ಅನ್ನ, ನೀರು, ಮಜ್ಜಿಗೆ ಅಷ್ಟೇ. ಅಂಗೈಅಗಲದ ರೊಟ್ಟಿ ಕೊಟ್ಟಿರಿ. ಆ ರೊಟ್ಟಿ ಬೆಳೆವ ಭೂಮಿನ್ನ ನೀವು ಇಟ್ಟಗೊಂಡಿರಿ. ಈಗ ಭೂಮಿನ ಕೊಟ್ಟು ಬಿಡ್ರಿ! ಗೌಡ್ರೆ ರೊಟ್ಟಿ ಬೆಳಕಂಡು ತಿಂತಾರ ಕೇರಿಮಂದಿ"[26] ಎಂದು ಚಂದ್ರಪ್ಪ ಬಡವರನ್ನು ಜೀತ ಪದ್ಧತಿಯಿಂದ ವಿಮುಕ್ತಗೊಳಿಸಿ ಕೊನೆಗೆ ಗೌಡನೇ ಭೂಮಿಯನ್ನು ರೈತರಿಗೆ ಹಂಚುವಂತೆ ಮಾಡಿ ಇಡೀ ವ್ಯವಸ್ಥೆಗೆ ಸೋಲುಂಟಾಗುವಂತೆ ಮಾಡುತ್ತಾನೆ. ರೈತರು ಸ್ವಾವಲಂಬಿಗಳಾಗಿ ಬದುಕಲು ಅವಕಾಶ ಕಲ್ಪಿಸಬೇಕೆಂಬ ಕಳಕಳಿ ಚಂದ್ರಪ್ಪನ ಪಾತ್ರದ ಮೂಲಕ ಅಮರೇಶರು ಪ್ರತಿಭಟನೆಯ ನಿಲುವನ್ನು ಅವಲೋಕಿಸಿದ್ದಾರೆ.

ಜಂಬಣ್ಣ:

'ಮಣ್ಣು ಸೇರಿತು ಬೀಜ' ಕಥೆಯಲ್ಲಿ ಮಾನವೀಯತೆಯನ್ನು ಮರೆದ ಪಾತ್ರ. ಈತನು ಮೊದಲು ಹೆಣ್ಣು ಹೃದಯದವನು. ಕಡುಬಡವ. ಕಾಯಿಲೆಯಿಂದ ನರಳುತ್ತಿರುವ ತನ್ನ ಅಕ್ಕ ನಾಗಮ್ಮನಿಂದ ಹಣದ ನಿರೀಕ್ಷೆಯಲ್ಲಿರುತ್ತಾನೆ. ಇಂದೋ ನಾಳೆಯೋ ಗಂಟು ತನಗಾದೀತು ಎಂದು ಹಪಹಪಿಸುತ್ತಾನೆ.

"ನಾಗಮ್ಮ ಇಷ್ಯಾಕ ಜಿಮಣಿ ಆಗಿದ್ದಾಳಂತೀನಿ? ಮೊದ್ಲಿಂದ ಇಂಗೆಕೋಡಿ ಸಾಯದ.... ಸಾಯ್ತದ. ಇದ್ದ ಜಿದ್ವ ಚೂರುಚಾರು ಬಂಗಾರನ್ನ ಎಲ್ಲಿಟ್ಟಿದ್ದಾದು? ಇದರ ಬಕ್‌ಬಾರ್ಲ ಬಡಿಯ...! ಬಂದು ಏಳೆಂಟು ವರ್ಷ ಆಯ್ತು... ತಂಗಿ ಗೋಳು ಕಣ್ಣಿಂದ ಎಂಗ್ ನೋಡ್ಲಿಯಂತ, ಬಂದು ಈ ನರಕದಾಗ ಬದುಕು ಮಾಡೀನಿ. ಒಂದು ದಿನ ಒಂತುತ್ತು ಒಳ್ಳೆದು ಬಾಯಿ ಕಾಣ್ಲೆಲ್ಲ...! ಸೀರೆ ಒಕ್ಕಂಬಂದೆ, ತೊಳೇದು ಬಳೇದು ಎಲ್ಲ ಮಾಡಿದೆ. ಇದೆಲ್ಲ....ತಂಗಿಯೆಂಬ ಕಕ್ಲಾತಿಗೆ ಮಾಡಿದೆ ನೋಡು! ಇಷ್ಟು ಮಾಡ್ಯಾನಂಬ ಅರುವಿಲ್ಲ ಪಾಪಿಗೆ. ಇದ್ದುದ್ದಿಟು ಕೈಯಾಗಿಟ್ರ ನಾನಾದ್ರೂ ಅರಾಮಿದ್ದೇನು, ಇದೇ ಊರಾಗ....ಗಯ್ಯನ್ನ ನೋಡ್ಕಂಡು....! ಜಂಬಣ್ಣ ಮನಸ್ಸಿನಲ್ಲೇ ಲೆಕ್ಕಚಾರ ನಡೆಸಿದ್ದ."[10] ಹೀಗೆ ಅಕ್ಕನ ಆಸ್ತಿ ಹಣಕ್ಕ ಆಸೆಯಿಂದ ಕಾಯುತ್ತಿರುವನು. ಅದೇ ಅಕ್ಕನಾಗಮ್ಮ ಸತ್ತಾಗ ದಂಬಡಿ ಕಾಸಿರುವುದಿಲ್ಲ. ನೆರೆಯವರು ಅಕ್ಕಮ್ಮ ಗಂಟು ಬಂತೊ, ಆಸ್ತಿನೂ ಬಂತೊ ಎಂದು ಲೇವಡಿ ಮಾಡುತ್ತಾರೆ. ಆದರೆ ಜಂಬಣ್ಣನ ಹತ್ತಿರ ಆಕೆ ಅಂತ್ಯ ಸಂಸ್ಕಾರ ಮಾಡಲು ಹಣವಿರಲಿಲ್ಲ. ಸಾಲ ಕೇಳುತ್ತಾನೆ. ಊರಿನವರ ಹತ್ರ ಅಂಗಲಾಚಿ ಮಣ್ಣು ಮಾಡಲು ಹಣ ಕೇಳುತ್ತಾನೆ. ಅವರೆಲ್ಲ ನಾಗಮ್ಮ ಸಾಯೋ ಮುಂದ ಗಂಟು ಕೊಟ್ಟಿಲ್ವ ಅದರಲ್ಲಿ ಮಣ್ಣು ಮಾಡ್ಸು ಎಂದು,ನಾಟಕ ಆಡ್ತಿದಿಯಾ ಎಂದು ಟೀಕಿಸುತ್ತಾರೆ. ಆದರೆ ಜಂಬಣ್ಣನ ಸ್ಥಿತಿಗೆ ಅಷ್ಟರಲ್ಲಿ ಊರಿನವರು, ಪೋಲಿಸನವರು "ನಾಗಮನ್ನಿಗೆ ವಿಷ ಹಾಕಿ ಕೊಲ್ಲದನೆಂಬ ಅಪಾದನೆ ಹುಟ್ಟಿಸುತ್ತಾರೆ. ಆಸ್ತಿ ಕಬಳಿಸಲಿಕೆಂತ ಎಂದು ಇಂತಹ ಸ್ಥಿತಿಯಲ್ಲಿ ಜಂಬಣ್ಣನಿಗೆ ಮನೆ ಬೀಳುವಂತೆ ಚೀರಬೇಕೆನಿಸುತ್ತದೆ. ಆಗ ಜಂಬಣ್ಣ ಸ್ಥೈರ್ಯವನ್ನು ಕಳೆದುಕೊಳ್ಳದೆ ಗಯ್ಯನಿಗೆ "ನಡೀ ಮನಿಗೆ ಹೋಗಾಮು, ಇದೇ ಊರಾಗ ಬಾಳವಿ ಮಾಡಿ, ಅದೇ ಕೌದ್ಯಾಗ ನಮ್ಮ ಹೆಣ, ನಮ್ಮ ಹೊಲ್ದಾಗ ಮಣ್ಣಾಗಂಗ ಬದುಕುಮು"[11] ಎಂದು ಬಾಳಿದ. ಜಂಬಣ್ಣ ಪಾತ್ರವನ್ನು ಓದುಗರ ಮನಕಲುಕುವಂತೆ ಪಾತ್ರಗಳ ವಾಸ್ತವತೆಯನ್ನು ಚಿತ್ರಿಸಿದ್ದಾರೆ. ಆದರೆ ಜಂಬಣ್ಣ ನಿಯಂತ್ರಣದೊಳಗೆ ಬದುಕಬೇಕೆಂಬ ನಿರ್ಧಾರ ಕೈಗೊಳ್ಳುವುದು ಈ ಸಮಕಾಲೀನ ಯುವಪೀಳಿಗೆಯ ದಿಟ್ಟ ನಿಲುವಿನತ್ತ ಜಂಬಣ್ಣನ ಪಾತ್ರ ಮುಖಮಾಡಿ ನಿಲ್ಲುತ್ತವೆ.

ದುರುಗ

ತಮಂದದ ಕೇಡು ಕಥೆಯಲ್ಲಿ ಶಾಂತಗೌಡನ ಜೀತದಾಳು ದುರುಗನು ಶಾಂತಗೌಡನನ್ನು 'ಯಪ್ಪೊ' ಅಂತ ಕರೆದರೆತಿಂದ ಕೂಳು ಅರಗುವುದೂ ಅಂತ ತಿಳಕಂಡಿದ್ದನು. ಗೌಡನು ದುರುಗನ ಹೆಂಡತಿಯೊಂದಿಗೆ ಲೈಂಗಿಕ ಸಂಬಂಧ ಬೆಳೆಸಿದ್ದು, ತನಗೆ ನೆರಳಾಗಿರುವ ಮರಗಳನ್ನು ಕಡಿಸಿದ್ದು ಎಲ್ಲ ಶೋಷಣೆಯನ್ನು ಸಹಿಸಿಕೊಂಡು ಶಾಂತಗೌಡನನ್ನು ಹೆಗಲ ಮೇಲೆ ಹೊತ್ತು ತಿರುಗುತ್ತಿರುತ್ತಾನೆ. ತನ್ನ ಮಗ "ಚೆನ್ನ ವಾಸಿಸುವ ರಾಯಚೂರು ನಗರಕ್ಕೆ ಹೋದರೂ ಸಹ ಆತನ ಮನಸ್ಸು ಮಾತ್ರ ಹಳ್ಳಿಯತ್ತಲೇ

ಹೊರಳುತ್ತವೆ. ದುರುಗನು 'ಚನ್ನಮಲ್ಲಯ್ಯ ನಾ ಊರಿಗೆ ಹೋಗತೀನಿ ನೀನು ತಣ್ಣಗಿರು ನನ್ಗ ಆ ಊರು. ಆ ತುಂಗಮ್ಮನ ನೀರು. ಶಾಂತಗೌಡನ್ನ ಸೂಗಪ್ಪ ಮಾಸ್ತರನ್ನ ಬಿಟ್ಟಿರಾಕ ಒಲ್ಲೆ ಅನಿಸ್ತದೆ ಅಂತ ಹೇಳಿ ಓಡಿ ಬಂದಿದ್ದ. ಊರಿಗೆ ಬಂದು ನಿಂತಾಗಲೇ ದುರುಗನಿಗೆ ಸಲೀಸಾಗಿ ಉಸಿರಾಡಿತ್ತು."[13] ಹೀಗೆ ದುರುಗನಿಗೆ ಚೆನ್ನ ಒಂದು ಕಣ್ಣಾದರೆ ಗೌಡನು ಇನ್ನೊಂದು ಕಣ್ಣಾಗಿದ್ದನು. ಕೊನೆಯಲ್ಲಿ "ಯಪ್ಪ ನನ್ಗ ನಿಗ್ಗ ಬುಡದ ನಂಟು. ನೀನಿದ್ದಲ್ಲಿ ನಾನು, ನಾನಿದ್ದಲ್ಲಿ ನೀನು ನನ್ಗ ನಿನ್ಗ ಬೇಧಯಿಲ್ಲ, ಜಾತಿಯಿಲ್ಲ ಹಂಗ ನಡಕಂಡು ಬಂದಿವಿ"[14] ಎನ್ನುತ್ತಾನೆ. ದುರುಗನು ರುದ್ರಮ್ಮನಲ್ಲಿಗೆ ಹೋದಾಗ ರುದ್ರಮ್ಮ ತನ್ನ ಮಗನನ್ನು ಸಾಯಿಸಲು ಸಂಚು ಮಾಡಿ ತನ್ನ ಮಗನ ಪ್ರಾಣಕ್ಕೆ ಕುತ್ತು ಬಂತೋ ಆಗ ಗೌಡನನ್ನೇ ನೀರಲ್ಲಿ ಮುಳುಗಿಸಿ ತಾನು ಸಾಯುವುದಕ್ಕೆ ಸಿದ್ಧನಾದ. ಈತನ ಪಾತ್ರನಾದ ಮೂಲಕ ಪ್ರತಿಭಟನೆಯ ಸ್ಫೋಟವನ್ನು ಸೂಚಿಸುತ್ತಾರೆ. ದುರುಗನು ಹಳ್ಳಿಯ ಪ್ರತೀಕವಾಗಿ ದುರುಗನನ್ನು ಗೌಡ ಶೋಷಿಸಿದರೂ ಶೋಷಣೆ ಇಲ್ಲವೆನ್ನುವಂತೆ ಕೊನೆಯಲ್ಲಿ ದುರುಗ ಶಾಂತಗೌಡ ತುಂಗಾನದಿಯಲ್ಲಿ ಇಬ್ಬರೂ ಸಾವನ್ನಪ್ಪುವುದು ಅತ್ಯಂತ ಮಾರ್ಮಿಕವಾಗಿ ಚಿತ್ರಿತವಾಗಿದೆ.

### ವಜ್ರಪ್ಪ

'ಸವಾರಿ' ಕಥೆಯಲ್ಲಿ ವ್ಯವಸ್ಥೆಯ ಹುಳುಕನ್ನು ಕ್ರೌರ್ಯತೆಯನ್ನು ಎದುರಿಸಿ, ತಾನು ಕಂಡುಕೊಂಡ ಸತ್ಯವನ್ನು ನಿರ್ಭಯವಾಗಿ ಹೇಳುತ್ತಾನೆ. ವಜ್ರಪ್ಪ ಆ ಸಮುದಾಯದ ಸ್ಮೃತಿ ಲೋಕವನ್ನು ಪ್ರತಿನಿಧಿಸುತ್ತಾನೆ. ಊರಿನಲ್ಲಿ ಯಾರು ಸತ್ತರೂ ವಜ್ರಪ್ಪನೇ ಕುಣಿ ತೋಡಬೇಕು. ಅದು ಆತನ ಕುಲ ಕಸುಬು ಮೂರು ವರುಷಕ್ಕೊಮ್ಮೆ ಸುಡುಗಾಡು ಸಿದ್ದ ಊರಿಗೆ ಬಂದಾಗ ರಿವಾಜಿನಂತೆ ವಜ್ರಪ್ಪನೇ ಅವನ ಸೇವೆ ಮಾಡುತ್ತಿದ್ದ. ಈಗೀಗ ಊರಲ್ಲಿ ಯಾರೆ ಸತ್ತರೂ ಅಂದು ಆ ಬಗ್ಗೆ ವಜ್ರಪ್ಪನಿಗೆ ಕನಸು ಬೀಳುತ್ತಿತ್ತು. ಹಾಗೆಯೇ ಸುಡುಗ ಸಿದ್ದ ಬರುವ ದಿನವೂ ಅವನಿಗೆ ಕನಸು ಬೀಳುತ್ತಿತ್ತು. ಶಿವಪ್ಪಗೌಡನ ತಂದೆ ಮಲ್ಲಪಗೌಡ ಸತ್ತಾಗಲೂ ವಜ್ರಪ್ಪನಿಗೆ ಕನಸು ಬೀಳುತ್ತದೆ. ಆದರೆ ಶಿವಪ್ಪಗೌಡನ ರಾಜಕಾರಣಕ್ಕಾಗಿ ಮಲ್ಲಪ್ಪಗೌಡನ ಸಾವಿನ ಸುದ್ದಿಯನ್ನೇ ಮರೆಮಾಚುತ್ತಾರೆ. ಮಾರನೆಯದಿನ ಸತ್ತನೆಂದು ಊರಿನವರಿಗೆ ತಿಳಿಸಲಾಗುತ್ತದೆ. ಮತ್ತೆ ಅದನ್ನೇ ನಿಜವೆಂದು ಎಲ್ಲರೂ ನಂಬುತ್ತಾರೆ. ಇದರಿಂದ ಮೊದಲ ಬಾರಿಗೆ ವಜ್ರಪ್ಪನ ಕನಸು ಹುಸಿಯಾಗುತ್ತದೆ. ಇದರಿಂದ ಆಘಾತವಾಗಿ ಅವನ ಸಾವಿಗೆ ಕಾರಣವಾಗುತ್ತದೆ. ಸತ್ತ ಮೇಲೆ ಸತ್ಯವು ಜಗಜ್ಜಾಹೀರಾಗುವುದು ಅವನ ಕನಸಿನ ಪ್ರಾಮುಖ್ಯತೆಯನ್ನು ಅರಿಯದೆ ಊರಿನ ಸಂಸ್ಕೃತಿಯು ಭ್ರಷ್ಟಗೊಳ್ಳುತ್ತದೆ. ನುಗಡೋಣಿಯವರು ವಜ್ರಪ್ಪನ ಪಾತ್ರವನ್ನು ಕಾಲಜ್ಞಾನಿಯಂತೆ ಚಿತ್ರಿಸಿದ್ದಾರೆ.

**ಹರಿಶ್ಚಂದ್ರ**

**ಒಡಲು ಗೊಂಡವರು** ಕಥೆಯಲ್ಲಿ ಪದವೀಧರನಾದ ಹರಿಶ್ಚಂದ್ರ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡಿದಾತ. ಗಣಿಗಾರಿಕೆಯಿಂದ ಪರಿಸರ ನಾಶವಾಗುತ್ತಿದೆಯೆಂದು ನಿರಂತರ ಹೋರಾಟ ನಡೆಸಿದರೂ ಫಲ ಕಾಣದೆ ಹರಿಶ್ಚಂದ್ರ ಭ್ರಷ್ಟತೆಗೆ ತುತ್ತಾಗಿ ಬದುಕನ್ನೇ ಮೂರಾಬಟ್ಟೆ ಮಾಡಿಕೊಂಡಿರುವ ಅಸಹಾಯಕ. ಅವ್ವ ಬಸವ್ವ, ಅತ್ತಿಗೆ ಗೌರಕ್ಕ, ಹೆಂಡತಿಯಾಗಬೇಕಿದ್ದ ರೇಣುಕಾ ಎಲ್ಲರನ್ನೂ ಸುಳ್ಳಿನ ಕೋಟೆಯಲ್ಲಿ ಕೂಡಿ ಹಾಕುತ್ತಾನೆ. ಯಾರಿಗೂ ಹೇಳದೆ ಅವ್ವ, ತಾತನ ಹೊಲಮಾರಿ ಮೋಸ ಮಾಡುತ್ತಾನೆ. ವಿದ್ಯಾಭ್ಯಾಸವಿದ್ದು ನಿರುದ್ಯೋಗ ಮತ್ತು ಜಾತಿಯ ಕಳಂಕ ಅವನನ್ನು ಹಾದಿ ತಪ್ಪಿಸುತ್ತದೆ. ಸಾಯಲಿರುವ ತಾಯಿಯನ್ನು ಮಣ್ಣು ಮಾಡಲು ಮಾರಗಲ ಜಾಗ ಸಿಗದಂತಹ ಸ್ಥಿತಿ ನಿರ್ಮಾಣವಾಗಿತ್ತು. ಆಗ ಮೈನ್ಸ್ ಗುತ್ತಿಗೆದಾರನಾದ ಅರುಣ ರೆಡ್ಡಿಯಬಳಿ ಹೋಗುತ್ತಾನೆ. ಹತ್ತು ವರ್ಷಗಳ ಹಿಂದೆ ನಿರುದ್ಯೋಗಿಯಾಗಿದ್ದಾಗ ಕೇರಿ ಮಂದಿಯನ್ನು ಕೂಡಿಕೊಂಡು 'ಪರಿಸರ ಉಳಿಸಿ' ಎಂದು ಚಳುವಳಿ ನಡೆಸಿ ಅರುಣ ರೆಡ್ಡಿಗೆ ಸಣ್ಣಪೆಟ್ಟನ್ನು ಕೊಟ್ಟಿದ್ದ. ಈಗ ಅದೇ ಅರುಣ ರೆಡ್ಡಿಯ ಬಳಿ ಹೋಗಿ "ಸರ್ ನಾನು ಬಿಕ್ಕಟ್ಟಿನಲ್ಲಿ ಬಂದಿದ್ದೀನಿ! ನನ್ನ ಅವ್ವ ಇವತ್ತೋ ನಾಳೆ ಅನ್ನುವಂತಿದ್ದಾಳೆ. ಇದೇ ಊರಲ್ಲಿ ಆಕೆಯ ಮಣ್ಣು ಮಾಡಬೇಕಾಗಿದೆ. ಆದ್ರೆ ಕೇರಿ ಮಂದಿಗೆ ಈಗೀಗ ಮಣ್ಣು ಮಾಡಲು ಜಾಗವೇ ಇಲ್ಲ. ಇದ್ದದ್ದು ಹೈವೆಗೆ ಒತ್ತುವರಿ ಆಗಿ ಹೋಯ್ತು...."[13] ಯಾರ ವಿರುದ್ಧ ಹೋರಾಟ ನಡೆಸಿದ್ದನೋ ಅವರ ಕೈಗೊಂಬೆಯಾಗಿ ಒತ್ತಡಕ್ಕೆ ಸಿಲುಕಿ ಹತಾಶನಾಗಿ ಸೋಲೊಪ್ಪಿಕೊಳ್ಳುತ್ತಾನೆ. ಹರಿಶ್ಚಂದ್ರನನ್ನು ಲೇಖಕರು ವ್ಯವಸ್ಥೆಯೊಳಗೆ ತಾನು ಬದುಕಬೇಕು ಎನ್ನುವಂತಹ ನಿಲುವನ್ನು ಅಭಿವ್ಯಕ್ತಿಸಿದ್ದಾರೆ.

**ಮಾದಪ್ಪ**

**ದೈವಕ್ಕೆ ಮೊದಲು ಶರಣೆಂಬೆವು** ಕಥೆಯಲ್ಲಿ ಪಾತಪ್ಪ ದೇವರ ಕಥನ ಮಾಡಿಕೊಂಡಿರುತ್ತಿದ್ದನು. ಇಡಿ ಗ್ರಾಮಸ್ಥರನ್ನು ಭಕ್ತಿಯ ಅಲ್ಲೆಯಲ್ಲಿ ತೇಲಿಸುತ್ತಿದ್ದನು. ಮಾದಪ್ಪನು ತಲತಲಾಂತರದಿಂದ ದೀಕ್ಷೆ ಪಡೆದಂದಿನಿಂದ ನಿರಾಂತಕವಾಗಿ ಹೆಂಡತಿ ಜತೆಯಲ್ಲಿ ಈ ಕಾಯಕ ಮಾಡಿಕೊಂಡಿದ್ದ. ಆ ಪ್ರದೇಶದ ಸಂಸ್ಕೃತಿಯಾಗಿ ಪಾತಪ್ಪದೇವರ ಜಾತ್ರೆಯೂ ಮೈಗೂಡಿತ್ತು.

'ಪಾತಪ್ಪದೇವರ ಕಥನ' ಒಂದು ಸಂಸ್ಕೃತಿಯ ಜೀವನ ಕ್ರಮದ ಸಾವಯವ ಅಂಗವಾಗಿತ್ತು. ಈ ಕಥೆಯನ್ನು ಜಾತ್ರೆ ದಿನ ಹಾಡುತ್ತಿದ್ದರು. ಅದು ಏನಾದರೊಂದು ಕಾರಣ ಕಥೆ ಇದ್ದಾಗ ಮಾತ್ರ ಅದೂ ದೈವಸ್ಥರು ಕರೆದಾಗ ಸಂಪ್ರದಾಯಿಕ ದಿರಿಸಿನಲ್ಲಿ ವೇಷಭೂಷಣಗಳಲ್ಲಿ ರಾತ್ರಿಯೆಲ್ಲಾ ಹಾಡುತ್ತಿದರು. ಮಾದಪ್ಪನಿಗೆ ತನ್ನ ಪ್ರತಿಭೆಗೆತಕ್ಕಂತೆ ವಿಶ್ವವಿದ್ಯಾಲಯದಲ್ಲಿ ಸಂಭಾವನೆ ವಿತರಿಸಿದಾಗ 'ಅಷ್ಟು ರೂಪಾಯಿ ಎಂದೂ ಕೈಯಲ್ಲಿ ಹಿಡಿದಿರಲಿಲ್ಲ. ಗಳಿಸಿಯೂ ಇರಲಿಲ್ಲ'. ಮಾದಪ್ಪನಿಗೆ ಪ್ರೋತ್ಸಾಹದ ರೂಪದಲ್ಲಿ ಹಣ

ದೊರಕುತ್ತಿದ್ದಂತೆ ಆತನ ಬದುಕೆ ಬದಲಾಗುತ್ತದೆ. ಅತಿಯಾಸೆಗೆ ಬಲಿಯಾಗಿ ಮಧ್ಯವ್ಯಸನಿಯಾಗಿ 'ಧನದಾಹಿ'ಯಾಗಿ ಪಾತಪ್ಪ ದೇವರ ಕಥನ ಪರಂಪರೆಯನ್ನೇ ವ್ಯವಹಾರಿಕವಾಗಿ ಬದಲಾಯಿಸಿಕೊಳ್ಳುತ್ತಾನೆ. ಧನದ ಮೇಲಿನ ದುರಾಸೆಗಾಗಿ ಆತನು ಶ್ರದ್ಧೆಯನ್ನು ಹಾಳು ಮಾಡಿಕೊಂಡು ದೈವದಿಂದ ತಿರಸ್ಕಾರಕ್ಕೊಳಗಾಗುತ್ತಾನೆ. ಮುಂದಿನ ಸಲ ದೈವದಿಂದ ವೀಳ್ಯಾ ಬಾರದಿದ್ದಕ್ಕೆ ಕಂಗಾಲಾಗುತ್ತಾನೆ. ತಾತ್ಕಾಲಿಕ ಸುಖದ ಆಸೆಗೆ ಬಲಿಯಾಗಿ ಶಾಶ್ವತ ನೆಮ್ಮದಿಯ ಬದುಕನ್ನೇ ಕಳೆದುಕೊಂಡು ಪಶ್ಚಾತ್ತಾಪಪಡುತ್ತಾನೆ. ಆದರೆ ನಾನು ನಂಬಿದ್ದ ದೈವ ಆತನನ್ನು ಕೈಬಿಡುವುದಿಲ್ಲ. ಊರ ಹಿರಿಯರು ಪುನಃ ಆತನಿಗೆ ಪಾತಪ್ಪ ದೇವರ ಕಥನಕ್ಕೆ ವೀಳ್ಯಾ ನೀಡಿದಾಗ ಭರವಸೆಯ ಬದುಕು ಗರಿಗೆದುರುತ್ತದೆ.

ನುಗಡೋಣಿಯವರ 'ಬಯಲು ಆಲಯದೆಡೆಗೆ' ಕಥೆಯಲ್ಲಿ ಸಂಸಾರ ಬಂಧನ ತ್ಯಜಿಸಿದ ಶಿವಯ್ಯನು ಪುನಃ ಸಂಸಾರಕ್ಕೆ ಮರಳುವ ಪಾತ್ರ ನಿರೂಪಣೆಯಿದೆ. ಹಾಗೆಯೇ 'ಮನ್ನಿಸಿ ಮೂಕಾದ ಮೇಲೆ' ಕಥೆಯಲ್ಲಿ ಮಲ್ಲಯ್ಯನು (ಮಲ್ಲಿಕಾರ್ಜುನ) ಈತನು ವಿದ್ಯಾವಂತ ನಾಗಲಕ್ಷ್ಮಿಯನ್ನು ಮದುವೆಯಾಗಿ ಮಾವನ ಮನೆಯಲ್ಲೇ ವಾಸಿಸುತ್ತಾ ತನ್ನನ್ನು ಸಾಕಿ ಸಲುಹಿದ ತಾಯಿಯನ್ನೇ ಮರೆಯುತ್ತಾನೆ. ಮಲ್ಲಯ್ಯನ ಭವಿಷ್ಯ ರೂಪಿಸಲು ದೊಡ್ಡಮ್ಮ ಪಟ್ಟ ಶ್ರಮ ಹೇಳತೀರದು. "ಆ ದಿನದಾಗ ದೊಡ್ಡಮ್ಮ ನನ ಸಲುವಾಗಿ ಜೀವವೇ ಒತ್ತಿಟ್ಟಂತೆ ದುಡಿದು ಹಣ್ಣಾದಳು"[೨೬] ಎಂದು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾನೆ. ಆತನ ಓದಿಗಾಗಿ ಎರಡು ಕೂರಿಗೆ ಹೊಲವನ್ನು ಒತ್ತಿಟ್ಟಿದ್ದಳು. ಬೆಟ್ಟದಷ್ಟು ಆಸೆ ಇಟ್ಟುಕೊಂಡಿದ್ದಳು. ಆದರೆ ತಾನು ಹೆಂಡತಿ ಕೆಲಸ ಸಿಕ್ಕ ನಂತರ ಅವರಿಂದ ದೂರವಾಗಿದ್ದರ ಬಗ್ಗೆ ಪಶ್ಚಾತ್ತಾಪಪಡುತ್ತಾನೆ. ಕಳಚಿಹೋದ ಕರಳು ಬಳ್ಳಿಯ ಸಂಬಂಧಕ್ಕಾಗಿ ಪುನಃ ಹಂಬಲಿಸುವುದರ ಮೂಲಕ ಮರಳಿ ಗೂಡು ಸೇರುವ ಆಶಯ ವ್ಯಕ್ತವಾಗಿದೆ. ಇಂತಹ ಪುರುಷ ಪಾತ್ರಗಳನ್ನು ನುಗಡೋಣಿಯವರು ಕಥೆಗಳಲ್ಲಿ ಮನೋಜ್ಞವಾಗಿ ಅವಲೋಕಿಸಿದ್ದಾರೆ.

**ಸ್ತ್ರೀ ಪಾತ್ರಗಳು** : ನುಗಡೋಣಿಯವರ ಅವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು ಶಕ್ತಿಶಾಲಿಯಾಗಿರುತ್ತವೆ. ಅವರೇ ಹೇಳಿದ ಪ್ರಕಾರ "ಈ ಪ್ರಾಂತ್ಯದ ಗಂಡಸರು, ಸೋಮಾರಿಗಳು, ಜಡರು ಬದುಕನ್ನು ಶ್ರಮವಹಿಸಿ ದುಡಿದು ಕಟ್ಟಿಕೊಳ್ಳಬೇಕೆಂಬ ಕನಿಷ್ಠ ಒತ್ತಡ ಇಲ್ಲದವರು, ಸ್ತ್ರೀ ಪಾತ್ರಗಳು ದುಡಿಯುವವರು ಎಲ್ಲಾ ಬಗೆಯ ಶೋಷಣೆಗೆ ಒಳಗಾಗಿಯೂ ಬದುಕನ್ನು ಕಟ್ಟಿಕೊಂಡು ಬದುಕಬೇಕೆಂಬ ಛಲ ಉಳ್ಳವರಾಗಿದ್ದಾರೆ. ನನ್ನ ಕಥೆಗಳಲ್ಲಿ ಬಂದಿರುವ ಸ್ತ್ರೀಯರು ಗಂಡಸರಿಗಿಂತ ಧೀಮಂತರು, ಉದಾತ್ತರು. ಒಬ್ಬ ಹೆಣ್ಣು ಒಬ್ಬ ಗಂಡಸಿನ ಕ್ರೌರ್ಯಕ್ಕೆ ತುತ್ತಾದರೂ ಕುಗ್ಗಿ ಹೋಗದೆ ಅದೇ ಗಂಡಸಿನ ಮುಂದೆ ಛಲದಿಂದ ತಲೆಯೆತ್ತಿ ಬದುಕುವ ಧೈರ್ಯವಂತಳಾಗುತ್ತಾಳೆ."[೨೭]

ಆ ನಿಟ್ಟಿನಲ್ಲಿ ಇವರ ಸ್ತ್ರೀ ಪಾತ್ರಗಳು. ನಾಗಮ್ಮ, ತಿಮ್ಮಕ್ಕ, ದೇವಕಿ, ಚಂದವ್ವ, ಮಾದೇವಿ, ಮರುಗಿ ಪಾತ್ರಗಳು ದಲಿತ ವರ್ಗದ ಹೆಣ್ಣುಗಳು. ಮೇಲ್ವರ್ಗದವರ ಕಾಮ ತೃಷೆಗೆ ತುತ್ತಾಗಿ ಗೌಡರ ದಾಳಿಗೆ ನಲುಗುತ್ತವೆ. ತಿಮ್ಮವ್ವ ಚಂದವ್ವನಂತಹ ಪಾತ್ರಗಳು ಶೋಷಣೆಗೆ ಸಿಲುಕಿದರೂ ಮಾನವೀಯತೆಯನ್ನು ಮರೆಯುತ್ತವೆ. ಆದರೆ ಅಕ್ಕಮ್ಮನ ಪಾತ್ರ ವ್ಯವಸ್ಥೆಯಲ್ಲಿನ ಕಿಡಿಯಾಗಿ ಗೋಚರಿಸುತ್ತಾಳೆ. ರುದ್ರಮ್ಮನ ಪಾತ್ರವು ಅಮಾನವೀಯತೆಯನ್ನು ಮೆರೆದ ಪಾತ್ರವಾಗಿದೆ.

ನಾಗಮ್ಮ

'ಮಣ್ಣ ಸೇರಿತು ಬೀಜ' ಕಥೆಯಲ್ಲಿ ನಾಗಮ್ಮ ಪುರುಷನ ಕಾಮತೃಷೆಗೆ ಒಳಗಾದ ಹೆಣ್ಣು. ಗಡ್ಡದ ಬಸಣ್ಣನಿಗೆ ಮೂರನೇ ಹೆಂಡತಿ. ಗಂಡ ಸತ್ತ ಮೇಲೆ ಅವನಿಗೆ ಹುಟ್ಟಿದ ಗಯ್ಯನನ್ನು ಸಾಕುವುದರಲ್ಲಿ ಜೀವ ತಳ್ಳಿದವಳು. ಕಾಯಿಲೆಯಿಂದ ನರಳುತ್ತಿದ್ದಳು. ಇವಳು ಜಂಬಣ್ಣನ ತಂಗಿ. ಇವಳ ಹಾಳಾದ ಬದುಕನ್ನು ಸರಿಪಡಿಸಿ ಹಾರೈಕೆ ಮಾಡುತ್ತಾನೆ. ಇದಕ್ಕೆ ನಾಗಮ್ಮನ್ನೇ ಹೇಳುವಂತೆ “ನಾಯಿ ಮುಟ್ಟಿದ ಗಡಿಗಿನ್ನ ಯಾರ್ ಕೇಳ್ತಾರ? ಅತ್ತ ಕಟಿಗೆಂಡವನೂ ಇಲ್ಲ. ಇತ್ತ ಕಲ್ತವನೂ ಇಲ್ಲ. ಬೀದಿನಾಯಂಗ ತಿರುಗಿ ತಿರುಗಿ ಹಸಿದು ತವರು ಮನಿಗೆ ಬಂದೆ. ಅಣ್ಣ ಜಂಬಣ್ಣ ಕರ್ಕಂಡ. ಎಂಗ್ ಬಿಡ್ತಾದ ಕರಳುಕಕ್ಕುಲಾತಿ!”[೮] ಎಂಬ ಮಾತಲ್ಲಿ ನಾಗಮ್ಮನ ಭಾವನಾತ್ಮಕ ಸಂಬಂಧದ ಚಿತ್ರಣ ಕಂಡು ಬರುತ್ತದೆ. ಇಲ್ಲಿ ಅಣ್ಣನ ಉದಾರತೆ ವಾತ್ಸಲ್ಯವನ್ನು ನಾಗಮ್ಮ ನೆನೆಯುತ್ತಾಳೆ. ಗಂಡನನ್ನು ಕುರಿತು “ದಿನ ಸಾದಿನಿ ಮ್ಯಾಲೆ ಎಂಗೋ ಸಲ್ಲು ಹಚ್ಚಿ ಈ ಮನಿಗೆ ಬಸ್ಯಾಗ ಉಡಿಕಿ ಮಾಡಿ ಕೊಟ್ಟ. ಇವನಿಗೆ ಮೊದ್ಲ ಹೆಂಡರು ಇಬ್ರೂ ಓಡಿ ಹೋಗಿದ್ರಂತ ಎಷ್ಟು ಜೀವ ನನಮ್ಯಾಗಂತಿನಿ! ಪಾಪಿಗೇಡಿನಾನು.... ಅವುನೂ ಹೋದ! ಹೋಗಾಕತ್ತಿನಿ ಸುಡುಗಾಡಿಗೆ ಪಾಪಿ ಜಲುಮ. ಇಂಥ ಪಾಪದ ಬಾಳವಿ ಬಾಳದ್ಕಿಂತ ಕಣ್ಣು ಮುಚ್ಚದೆ ಮೇಲು”[೯] ಎಂದು ತನನ್ನು ಶಪಿಸಿಕೊಳ್ಳುತ್ತಾಳೆ.

ಆದರೆ ತನ್ನ ಅಣ್ಣನಿಗೆ “ಯಣ್ಣ, ನಂದು ಸಂತೆ ಮುಗ್ಯಾಕಬಂದಾದ ನೀ ನನ್ನ ಪರಾಮರಕಿ ಮಾಡಿದ್ದ, ನಂತಾಕ ಬೇಕಾದೊಟಿತ್ತು ಎಲ್ಲ ಕನಸಿನಂಗ ಕರಗಿ ಹೋಯ್ತು. ಗಯ್ಯಪ್ಪಗ ಹೆಣ್ಣು ಹುಡುಕ್ಯಾಡಿ ಒಂದು ಮದಿವಿ ಮಾಡಿದ್ರ ಮಗ ಬೇಸಾತನಂತ ಊರಾಗಿನ ಮಂದಿ ಅಂದ್ರ, ಹೆಣ್ಣು ಹುಡುಕ್ತೀವಿಯಂತ ಎಲ್ಲ ಬಳಕಂಡ್ರು. ಮಗನ ಮದಿವಿ ಆದ್ರ ಬೇಸಾತನೆಂಬ ಭ್ರಮ್ಯಾಗ ನಾ ಹಾಳಾದೆ. ಗೌಡ ಹದ್ದಿನಂತ ಕಣ್ಣಾಕ್ಯಾನ! ಹೆಣ್ಣು ಕೊಡದಂಗ ಮಾಡ್ದ ಯಾಕಂದ್ರ ಮುಂದ ಆಸ್ತಿ ನುಂಗಾಕ ಬೇಕಲ್ಲ? ವಂಶ ಬೆಳಿಬಾರದು ಅಂಬ ಕೆಟ್ಟ ಹುಳ ಅದು. ನೀ ಮಸ್ಯಾಗಿದ್ರು ಕೊಡೋದು ತಗಂಬದ್ರಾಗ ನಿನ್ನ ಮುಂದಮಾಡ್ಲಿಲ್ಲ. ಕಾಳುಕಡಿ ಎಲ್ಲ ಹೋದವು. ಗುಂಡಿನ ಹೊಲ, ನಡುಗಡ್ಡೆ ಹೊಲ, ಈ ಮನಿ ಉಳುದಾವ. ಇದೀಟು

ತಗಂಡು ಗಯ್ಯಪ್ಪನ್ನ ಸಲುವು. ನಾ ಮಂದಿಗೆ ಕೊಟ್ಟ ಸಾಲ ಮರಳಿ ಬರಂಗಿಲ್ಲ. ನೀ ಕೇಳಾಕು ಹೋಗ್ಬ್ಯಾಡ. ಆದ್ರ ಒಂದು ಮಾತು ನೆಪ್ಪಿಟ್ಟಿರು. ಈ ಊರಾಗ ಗೌಡ್ರು ಗೀಡ್ರು ನಿನ್ನ ಸಹಾಯ ಮಾಡ್ತೀವಿ ಅಂತ ಬಂದ್ರ ನೀ ಯಾರ ಕೈಗೆ ಸಿಗದಂಗಿರು. ಅಂಗೇನಾದ್ರು ಅವುರು ಮಾತು ಕೇಳಿ ಹೋದ್ರ ನಿನ್ನ ಕತೆ ಮುಗಿತಂತ ತಿಳಿ. ಎಂಟೆದೆಯವರು ಬಂದ್ರೂ ನೀ ಊರು ಬಿಡಬ್ಯಾಡ! ಇದೇ ಊರಾಗ ಹೊಲಮನಿ ಮಾಡ್ಕಂಡಿರು. ಈ ಮಾತು ನೆಪ್ಪಿಟ್ಟುಕೊಂಡು ಬಾಳಿವಿ ನಡಸು"[20] ಎಂದು ಆಯಾಸದಿಂದ ಒಂದೊಂದು ಮಾತು ಒತ್ತಿ ಹೇಳಿದಳು. ಉಡಿ ತುಂಬ ಕಟ್ಟಿಕೊಂಡ ಆಸೆಗಳು ನಾಗಮ್ಮನ ಮಾತಿನಿಂದ ಸೋರಿ ಹೋದವು. ರಕ್ತ ಸಂಚಾರವೇ ನಿಂತಂತಾಯಿತು. ಹೀಗೆ ಆ ಶಬ್ದದೊಳಗಣ ನಿಶ್ಯಬ್ದದಲ್ಲಿ ಚಿತ್ತ ಹರಿಸುತ್ತಾಳೆ.

**ತಿಮ್ಮಕ್ಕ**

ದಾರಿ ಮೂಡಿಸುವ ಹೆಜ್ಜೆಗಳು ಕಥೆಯ ತಿಮ್ಮಕ್ಕ ಹಲವು ಗಂಡಸರ ಜೀವನದಲ್ಲಿ ಪ್ರವೇಶಿಸಿ ಬಂದವಳಾದರೂ ಸುಲಭವಾಗಿ ಶೋಷಣೆಗೆ ಬಲಿಯಾಗದ ಸ್ವತಂತ್ರ ಮನೋಭಾವದ ದಿಟ್ಟ ಹೆಣ್ಣು ಜಾತಿಯ ಹಂಗು ತೊರೆದು ತನ್ನ ಕೆಲಸದಲ್ಲಿ ನಂಬಿಕೆ ಇಟ್ಟವಳು. ಆರ್ಥಿಕವಾಗಿ ಸಾಮಾಜಿಕವಾಗಿ ನೆಟ್ಟಗೆ ನಿಲ್ಲಬೇಕೆಂಬ ಹಠ ತೊಟ್ಟವಳು. ಈ ಕಥೆಯಲ್ಲಿ ಅವಳ ವ್ಯಕ್ತಿತ್ವದ ಘನತೆ ಉದಾತ್ತತೆಗಳು ತೀವ್ರ ಪರೀಕ್ಷೆಗೆ ಒಳಗಾಗುತ್ತವೆ. ಅವಳ 'ಎಮ್ಮೆ' ಗರ್ಭಧರಿಸಲಿಲ್ಲ. ಆದರೆ ಅವಳ ಮಗಳು ಮಾದವಿ ಮದುವೆಗೆ ಮುನ್ನ ಮುಸಲ್ಮಾನನೊಬ್ಬನಿಂದ ಗರ್ಭಧರಿಸುತ್ತಾಳೆ. ಈ ಎರಡೂ ಸ್ಥಿತಿಗಳು ಅವಳನ್ನು ದಿಕ್ಕೆಡಿಸಿದರೂ ಅವಳು ಕೈಗೊಳ್ಳುವ ತೀರ್ಮಾನಗಳು ಮಹತ್ವ ಪೂರ್ಣವಾದವು. ಎಮ್ಮೆಯನ್ನು ತಿನ್ನಲು ನೀಡಿ, ಮಗಳನ್ನು ಕೂಡಿದವನೊಂದಿಗೆ ಮದುವೆ ಮಾಡಬೇಕೆಂದು ತೀರ್ಮಾನಿಸುತ್ತಾಳೆ. ಮಾರೆಮ್ಮನ ಗುಡಿಕಡೆ ನೋಡಿ 'ಮಾರೆಮ್ಮವ್ವ 'ತಾಯಿ ನೀನೇ ನನ್ನ ದ್ಯೆವ! ಉಳಸದು ಅಳುಸದು ನಿನ್ನ ಕೈಯಾಗಾದ ನಾ ಕೆಟ್ಟೀನಿ ಕರೆವ್ವ. ಅಂಗಂತ ನಾ ಚಿಂತಿ ಮಾಡಿಲ್ಲ. ಬದುಕು ನೀ ಕೊಟ್ಟಂಗ ನಾನು ನುಂಗಿಕೊಂಡು ಉಳಿದು ಬದುಕಿನಿ. ನನ್ನಂಗ ನನ್ನ ಮಗಳು ಬಾಳವಿ ಆಗಬಾರದಂತ ಅಂದುಕೊಂಡಿದ್ದೆವ್ವ! ಆದ್ರೆ ಈಗ ಆಕಿ ದಾರಿ ತಪ್ಪ್ಯಾಳ. ಎಂದು ನಾ ನಿನ್ನ ಏನೂ ಕೇಳಿಲ್ಲ. ಈಗನೂ ಕೇಳಾಕ ನಿಂತಿಲ್ಲ. ನನ್ನ ಮಗಳನ್ನ ಆ ಹುಸೇನಿ ಹಾಳು ಮಾಡ್ಯಾನ ಈಗ ಅವ್ರನು ನನ್ನ ಮಗಳಿಗೆ ತಾಳಿಕಟ್ಟಿ ಮನ್ಯಾಗ ಕರಕಳ್ಳಿ. ನನಗೇನೂ ಜಾತಿಗೀತಿ ಯಿಲ್ಲ! ನನ್ನ ಮಗಳನ್ನ ತಾಳಿಕಟ್ಟಿ ಮನ್ಯಾಗ ಕರೆಕಂಡ್ರ ಸರಿ ಇಲ್ಲಂದ್ರ ಈ (ನಡುವಿನಲ್ಲಿದ್ದ ಕುಡುಗೋಲು ತೆಗೆದು) ಕುಡಗಲ್ಲಿನಿಂದ ಅವ್ರನ್ನ ಕಡುದು ನಿನಗಬಲಿ ಕೊಡ್ತೀನಿ ಇದೇ ನನ್ನ ದಾರಿ ಎಂದು ಸಿಟ್ಟಿನಿಂದ ಅಂದುಕೊಂಡು ಕೈ ಮುಗಿದು ಅಡ್ಡ ಬಿದ್ದೆದ್ದಳು. ಒಂದು ಕೈಯಲ್ಲಿ ತಾಳಿ, ಇನ್ನೊಂದು ಕೈಯಲ್ಲಿ ಕುಡುಗೋಲು ಹಿಡಿದು ಹುಸೇನಿಯ ಹೊಲದ ಕಡೆ ಹೆಜ್ಜೆ ಹಾಕಿದಳು."[21]

ಇಲ್ಲಿ ಅರ್ಥಹೀನ ಸಾಂಪ್ರದಾಯಿಕ ಅಡೆತಡೆಗಳನ್ನು, ತನ್ನ ಭ್ರಮೆಗಳನ್ನು ಏಕಕಾಲಕ್ಕೆ ತೊಡೆದು ಹಾಕಿ ಮಾನವೀಯ ನೆಲೆಯಲ್ಲಿ ಸತ್ಯವಂತ ಮಾದೇವಿ ನಿಲ್ಲುತ್ತಾಳೆ. ಕಥೆಗಾರನ ದೃಷ್ಟಿಕೋನ ನಾಯಕಿ ತಿಮ್ಮಕ್ಕಳ ನಿರ್ಣಯಗಳ ಪರವಾಗಿಯೇ ಇದ್ದು, ಅವರ ಧೋರಣೆಗಳ ದಿಕ್ಕು ಸ್ಪಷ್ಟವಾಗುತ್ತದೆ.

**ಅಕ್ಕಮ್ಮ**

'ಹೊತ್ತು ಮೂಡುವ ಸಮಯ' ಕಥೆಯಲ್ಲಿ ಅಕ್ಕಮ್ಮ ದೊಡ್ಡನ ಗೌಡನ ಮೂರನೇ ಹೆಂಡತಿ. ಈಕೆಗೆ ದೊಡ್ಡನಗೌಡ ಸ್ಪರ್ಶ ಹಿತವೆನಿಸುವುದೇ ಇಲ್ಲ. ಅವಳೇ ಹೇಳಿದಂತೆ '...ದೊಡ್ಡನಗೌಡನ ಜೊತೆ ಮಲಗುವುದು ನರಕಯಾತನೆ ಅನುಭವಿಸಿದಂತೆ. ನೆನೆಸಿಕೊಂಡರೆ ಮೈಜುಂ ಎನ್ನುತ್ತದೆ, ಹೇಸಿಗೆ ಎನಿಸುತ್ತದೆ."[32] ಎನ್ನುತ್ತಾಳೆ. ಅಕ್ಕಮನಿಗೆ ಮದುವೆಯಾಗಿ ಅದೇ ಮೂರು ನಾಲ್ಕು ವರ್ಷಗಳಾಗಿದ್ದವು. ಮೂರು ನಾಲ್ಕು ವರ್ಷಗಳೆಲ್ಲ ಮನಸ್ಸಿಗೆ ವಿರುದ್ಧವಾಗಿ ಸಂಸಾರ ನಡೆಸುತ್ತ ಬೇಸತ್ತಿದ್ದಳು. ಲಿಂಗ ಕೈಗೆ ಬಂದು ಮನೆಯಲ್ಲೇ ದುಡಿಯುತ್ತಿದ್ದ. ಬೆಳಗಾದರೆ ಕಣ್ಣು ಮುಂದೆ ಹರಿದಾಡುತ್ತಿದ್ದ. ನಿಂತಲ್ಲಿ ನಿಲ್ಲಲಾರದೆ ಚೆಂಡಿನಂತೆ ಪುಟಿಯುವ ದಲಿತ ಲಿಂಗನಿಗೆ ಪುಳಕಿತಳಾಗುತ್ತಾಳೆ. ಮೈಮನಸ್ಸಿನಿಂದ ಲಿಂಗ ಮೂಡಿಬಂದ. ಮನಸ್ಸು ಕದಡತೊಡಗಿತು ಎಂದು ರೋಮಾಂಚಿತಳಾಗುತ್ತಾಳೆ. ಲಿಂಗನೊಂದಿಗಿನ ಲೈಂಗಿಕ ಸಂಪರ್ಕ ಸಫಲವಾಗುವುದಿಲ್ಲ. ಅಕ್ಕಮ್ಮನಿಗೆ ಲಿಂಗನಂತಹ ಗಂಡ ನನಗ್ಯಾಕೆ ಸಿಗಲಿಲ್ಲ ಎಂದು ಕೊರಗುತ್ತಾಳೆ. ಅವರಿಬ್ಬರ ಅನೈತಿಕ ಸಂಬಂಧ ಗೊತ್ತಾದಾಗ ಗೌಡ "ಲೇ ಜಾತಿಗೇಡಿ ನಿನ್ನ ಮ್ಯಾಲೆ ನಂಗಾ ಕಣ್ಣಿತ್ತು ಎಂದು ಒದ್ದು ಲಿಂಗನ ಕೂದಲಿಡಿದೆಳೆದು ಕಟ್ಟಿ ಇವನ್ನ' ಎಂದಾಗ ಅಕ್ಕಮ್ಮನು ಗಂಡನ ಇಂತಹ ರಾಕ್ಷಸ ಕೃತ್ಯವನ್ನು ಕಂಡು ಭಯದಿಂದ ತತ್ತರಿಸಿದಳು. ಲಿಂಗ... ದೈವಕ್ಕೆ ಕರುಣೆ ಇಲ್ಲಲೋ ನಿನ್ನ ಕಣಕ್ಕೆ ಕರ್ಕೊಂಡು ಹೋಗಿ ಹಂತಿ ಗುಂಡಿಗೆ ಹಾಕಿ ತುಳಸಿ ಬಿಟ್ಟರಲ್ಲೊ!' ನನ್ನನ್ನು ಅದೆಂಗ ಬಿಟ್ಟನೋ ನಿಮ್ಮ ಕಟುಕನಂತಹ ಗೌಡ"[33] ಎಂದು ಅರಚುತ್ತಾಳೆ.

ಅಕ್ಕಮ್ಮನಿಗೆ ಗಂಡನ ನಿರ್ವೀರ್ಯ ತನದಿಂದ ಲಿಂಗನ ನಂತರವೂ ಸಹ ಮಕ್ಕಳ ಭಾಗ್ಯವನ್ನು ಪಡೆಯಬೇಕು, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಆಸ್ತಿ ಬರಬೇಕು ಎಂದು ಒಂದೇ ಕುಡಿ ಸಾಕು ಎಂದುಕೊಂಡಾಗ ಮೈಯಲ್ಲಿ ಬಿಸಿಯಾಗಿ ಉರಿಯತೊಡಗುತ್ತಾಳೆ. ಕೊನೆಗೆ ಲಿಂಗನ ಮಗ ಭೀಮನನ್ನು ಸೆಳೆಯಲು ಯತ್ನಿಸುತ್ತಾಳೆ. ಭೀಮನ ಜೊತೆಗಿನ ಸಂಬಂಧದಿಂದಾರೂ ಮಕ್ಕಳನ್ನು ಪಡೆಯಲೇ ಬೇಕು ಎಂದು ತೀರ್ಮಾನಿಸುವುದು ಮೇಲ್ಜಾತಿಯ ಸ್ತ್ರೀ ಪಾತ್ರವು ಕೆಳ ಜಾತಿಯ ಪುರುಷರತ್ತ ಚಲಿಸುವುದು ಪ್ರತಿಭಟನೆಯ ಸಂಕೇತವಾಗಿ ವ್ಯವಸ್ಥೆಯಲ್ಲಿನ ಕಿಡಿಯಾಗಿ ಅಕ್ಕಮ್ಮನ ಪಾತ್ರವನ್ನು ನುಗಡೋಣಿಯವರು ಚಿತ್ರಿಸುತ್ತಾರೆ.

ಚಂದವ್ವ

'ತಮಂದವ ಕೇಡು' ಕಥೆಯಲ್ಲಿ ಚಂದವ್ವ ದುರುಗನ ಹೆಂಡತಿ. ಬಡತನದಲ್ಲಿದ್ದರೂ ಹಾಡಿಕೊಂಡು ದುಃಖ ಮರೆತವಳು. ಅವಳು ಹಾಡುವೇ ಹಾಡುವ ಅವಳ ಜೀವನಕ್ಕೆ ಮೃತ್ಯುವಾಗಿ ಅವಲೋಕಿಸುತ್ತದೆ. ಚಂದವ್ವ ಅದೆಷ್ಟು ಚೆಂದ ಹಾಡುತ್ತಿದ್ದಳೆಂದರೆ ಹೊತ್ತು ಮುಣಗಿದ ಮ್ಯಾಲೆ ಕೇರಿಯ ಆಸತ್ತ ಬೇಸತ್ತ ಜೀವಗಳು ಚಂದವ್ವನ ಮರಗಳಿಗೆ ಬಂದು ಕುಂತು ಹಾಡು ಕೇಳಿ ನಿರ್ಮಳ ಉಸಿರು ಬಿಟ್ಟು ನೆಮ್ಮದಿಯ ಉಸಿರು ತುಂಬಿಕೊಳ್ಳುತ್ತಿದ್ದರು. ಕೇರಿಯ ಹಿರಿಯ ಬಸಪ್ಪ "ಚಂದವ್ವ ನಿನ್ನ ಪದಗಳು ನಮ್ಮ ಎದ್ಯಾಗಿನ ಚಿಂತೆನ ತಣ್ಣಗ ಮಾಡತವ! ಬದುಕಬೇಕು ಅಂಬ ಹುರುಪು ಮುಡುಸ್ತಾವ' ಅಂತಿದ್ದ. ಶಾಂತಗೌಡನು ಚಂದವ್ವನನ್ನು ಕುರಿತು 'ನನ್ನ ಹೆಣ್ತಿಯಾಗಿ ಚಂದವ್ವ ಯಾಕ ಹುಟ್ಟಬಾರದಿತ್ತು? ಅಂತ ನೂರು ಸಲ ಅನಕಂಡಿದ್ದ.' ಆ ಮ್ಯಾಲೆ ತಾಳಿ ಕಟ್ಟಿಸಿಕೊಳ್ಳಲಿಲ್ಲ. ಕರೇಕಲ್ಲಿನ ದೊಡ್ಡಮನ್ಯಾಗಿದ್ರು ಗೌಡ ಸಾನಿ ಅಂತನಿಸಿಕೊಳ್ಳಲಿಲ್ಲ ಅಂಬೋದು ಬಿಟ್ಟರೆ ಉಳಿದೆಲ್ಲ ವಿಷಯದಾಗ ಚಂದವ್ವ ಶಾಂತಗೌಡನ ಹೆಣ್ತಿಯಾಗಿ ಬಿಟ್ಟಳು."[19] ಆಳೋ ಗಂಡಿಗೆ ನೂರು ಹೆಣ್ಣುಗಳಂತೆ ಅನ್ನುವ ಹಾಗೆ ಚಂದವ್ವನ ಪರಿಸ್ಥಿತಿಯಾಗಿತ್ತು.

ಚಂದವ್ವಳು ಶಾಂತಗೌಡನ ವರ್ತನೆಯನ್ನು ತಪ್ಪು ಮಾಡಿದೆ ಅನಿಸಿ ಕೊರಗ ತೊಡಗಿದಳು. ಇವಳು ಕುಸುರಿಲ್ಲದವಳು. ಮುಚ್ಚಿಟ್ಟುಕೊಳ್ಳದು ಬ್ಯಾಡನಿಸಿ ದುರುಗನಿಗೆ ಹೇಳುತ್ತಾಳೆ. ದುರುಗ ದಪದಪ ಬಡುದು ಕುಂತುಬಿಟ್ಟ. ಇದರಿಂದ ಚಂದವ್ವ ಮನೆಬಿಟ್ಟು ಹೋಗುತ್ತಾಳೆ. ದುರುಗನು ಕರೆಯಲು ಹೋಗುವುದಿಲ್ಲ. ಚನ್ನನಿಗಾಗಿ ದುರುಗನೇ ಹೋಗಿ ಆಕೆಯನ್ನು ಕರಕಂಡುಬಂದ. ಆದರೆ ಶಾಂತಗೌಡ ಚಂದವ್ವನ ಸಂಬಂಧವನ್ನು ಕಂಡರೂ ಕಾಣದ ಹಾಗೆ ಚನ್ನ ಮತ್ತು ದುರುಗನು ಮೂಕ ಪ್ರೇಕ್ಷಕನಂತೆ ಇರುತ್ತಾರೆ. ಹೀಗೆ ಚಂದವ್ವ ಶಾಂತಗೌಡನ ಶೋಷಣೆಗೆ ಒಳಗಾದರೂ ತನ್ನ ಮಗ ಮತ್ತು ಗಂಡನಿಗಾಗಿ ಎಲ್ಲ ಕಷ್ಟವನ್ನು ಅವಡುಗಟ್ಟಿ ಸಹಿಸಿಕೊಳ್ಳುವಳು. ಕಷ್ಟಗಳ ಮಧ್ಯೆಯು ಚಂದವ್ವ ಅಬಲೆಯಾಗದೆ ಪ್ರಬಲತೆಗೆ ಸಾಕ್ಷಿಯಾಗಿದ್ದಾಳೆ.

ದೇವಕಿ :

'ಒತ್ತೆ' ಕಥೆಯಲ್ಲಿ ದೇವಕಿಯ ಪಾತ್ರ ರಾಜಪ್ಪನಿಗೆ ಸ್ವಂತ ಹೆಂಡತಿ ಆಗಿರದಿದ್ದರೂ ಅವಳು ತೋರಿಸುವ ಪ್ರೀತಿ, ತ್ಯಾಗ ಮಾತ್ರ ಆದರ್ಶಯುತವಾದುದು. ದೇವಕಿಯ ಪಾತ್ರ ಇಟ್ಟುಕೊಂಡವಳಾದರೂ ಸಹ ಸಹಾನುಭೂತಿಗೆ ಅರ್ಹವಾಗುತ್ತದೆ. ರಾಜಪ್ಪನ ಬಯಕೆ ಈಡೇರಿಕೆಗಾಗಿ ತಾಳಿಯನ್ನೇ ಮಾರುವುದು ಆಕೆಯ ಸಂವೇದನಾಶೀಲ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ರುದ್ರಮ್ಮ

'ತಮಂಧದ ಕೇಡು' ಕಥೆಯಲ್ಲಿ ರುದ್ರಮ್ಮ ಗತ್ತಿನಿಂದ ವರ್ತಿಸುವ ಪಾತ್ರ, ಶಾಂತಗೌಡನ ಅಕ್ಕ. ಶಾಂತಗೌಡನ ಮಗಳು ಅಕ್ಕಮಹಾದೇವಿಯನ್ನು ಓದಿಸಿ ತನ್ನ ಮಗನಿಗೆ ತಂದುಕೊಳ್ಳಬೇಕೆಂದು ತೀರ್ಮಾನಿಸಿದ್ದಳು. ಇದಕ್ಕೆ "ಚೆನ್ನನ್ನು ಕರೆಸಿ ಸಣ್ಣಾಗಿ ಕಳುಹಿಸಿ ತುಂಗಮ್ಮನಲ್ಲಿ ಚಲ್ಲಿಸಿ ಬಿಡ್ತಿನಿ ಏನಾ? ಆ ಮೇಲೆ ಜಲ್ದಿ ಅಕ್ಕಮನನ್ನು ಈ ಮನೆಗೆ ಸೊಸೆಯನ್ನಾಗಿ ಮಾಡ್ಕಂತೀನಿ"[19] ಎಂದು ಯೋಚಿಸುವ ಪರಿ ಜಮೀನ್ದಾರಿ ವ್ಯವಸ್ಥೆಯ ಕರಾಳತೆಯ ಮುಖವನ್ನು ಅನಾವರಣಗೊಳಿಸುತ್ತದೆ.

ಹೀಗೆಯೇ ಕುಡಿಬಂದ ದೀಪಗಳು ಕಥೆಯಲ್ಲಿ 'ದೇವಿಯ ಪಾತ್ರ ಮನೋರೋಗಿಯಂತೆ ಕಂಡರು ಕೊನೆಯಲ್ಲಿ ಮತಂಗಬೆಟ್ಟ ಹತ್ತಿ ಗವಿಯನ್ನು ಹೊಕ್ಕು ಪರಿಪೂರ್ಣತೆಯತ್ತ ಸಾಗುವುದು ವಿಶೇಷವೆನಿಸುತ್ತದೆ. 'ಒಡಲು ಗೊಂಡವರು' ಕಥೆಯಲ್ಲಿ ವಿದ್ಯಾವಂತರಾದ ಗೌರಕ್ಕ ರೇಣುಕಾರ ಪಾತ್ರಗಳು ವಿರುದ್ಧ ದಿಕ್ಕಿನಲ್ಲಿ ಚಲಿಸುತ್ತವೆ. ಕೌಟುಂಬಿಕ ಸಂಬಂಧಗಳ ಬಿರುಕು ಸುಶಿಕ್ಷಿತ ಪಾತ್ರಗಳ ಮುಖಾಂತರ ಸ್ಪಷ್ಟವಾಗಿ ಗೋಚರಿಸುತ್ತವೆ. ಹಾಗೆಯೇ 'ಕೊರಡು ಕೊನರುವ ಪರಿ' ಕಥೆಯಲ್ಲಿ ಕಾವಿಧಾರಿಗಳು ಅಮಾಯಕರನ್ನು ಶೋಷಿಸುವ ರೀತಿ ಹಾಗೂ ಶೋಷಣೆಗಳ ಕಾರ್ಮೋಡಗಳ ಮಧ್ಯೆಯೇ 'ಚುಕ್ಕಿ' ಪಾತ್ರವು ಮಿನುಗುತ್ತದೆ. ಆಶಾಕಿರಣದ ಪ್ರತೀಕವಾಗಿದೆ.

'ದಾಳಿನಡೆದಾವೋ ಅಣ್ಣಾ' ಕಥೆಯಲ್ಲಿ ಮಲ್ಲಯ್ಯನ ಪಾತ್ರವು ವರ್ತಮಾನ ಕಾಲದಲ್ಲಿ ನಿಂತು ಭೂತಕಾಲದ ಸುಂದರ ಬದುಕಿನ ಸಿಂಹಾಲೋಕನದಲ್ಲಿ ತೊಡಗುತ್ತದೆ. ವರ್ತಮಾನದ ದಾರುಣ ಸ್ಥಿತಿಯನ್ನು ಭೂತಕಾಲದ ಅವಿಸ್ಮರಣೀಯ ಕ್ಷಣಗಳೊಡನೆ ಆತ್ಮವಲೋಕನ ಮಾಡುತ್ತವೆ. ನುಗಡೋಣಿಯವರ ಪಾತ್ರಗಳಲ್ಲಿ ಜಮೀನ್ದಾರಿ ಪಾತ್ರಗಳು ಗೆಲ್ಲುತ್ತವೆ. ಬಡವರ, ದಲಿತರ ಪಾತ್ರಗಳು ಸೋತರೂ ಸಹ ಓದುಗರ ಮನಸ್ಸನ್ನು ಗೆಲ್ಲುವಲ್ಲಿ ಸಫಲವಾಗುತ್ತವೆ. ಹಾಗೆಯೇ ಶೋಷಕ ವರ್ಗದ ಕೆಲವು ಪಾತ್ರಗಳೂ ಸಹ ಓದುಗರ ಅನುಕಂಪಗಳಿಸುತ್ತವೆ. ದಲಿತ ಸಮುದಾಯದ ಒಡಲಿನಿಂದ ಬೆಳೆದ ಪಾತ್ರಗಳು, ಮುಗ್ಧತೆ, ಅಂತಃಕರಣ, ಮಾನವೀಯತೆಯಿಂದ ಗಮನ ಸೆಳೆಯುತ್ತವೆ. 'ದುರುಗ'ನಂತಹ ಪಾತ್ರವು ಪರಂಪರಾಗತ ಶೋಷಣೆಯ ಜೀವಂತ ಸಾಕ್ಷಿಯಾಗಿ ನಿಂತಿವೆ.

ನುಗಡೋಣಿಯವರ ಪಾತ್ರಗಳು ನಿಸರ್ಗದೊಂದಿಗಿನ ಜೀವರಾಶಿಯೊಡನೆ ಅನುಸಂಧಾನ ನಡೆಸುತ್ತವೆ. ಪ್ರಾಕೃತಿಕ ವಸ್ತು, ಕ್ರಿಯೆ, ಜೀವಿಗಳು ಪಾತ್ರಗಳು ಪಾತ್ರಗಳಾಗಿ ಒಡಮೂಡಿವೆ. 'ದಾಳಿ ನಡೆದಾವೋ ಅಣ್ಣಾ!' ಕಥೆಯಲ್ಲಿ ಮಲ್ಲಯ್ಯನಿಗೂ ಶಿವನಕೊಳ್ಳಕ್ಕೂ ಭಾವನಾತ್ಮಕ ಸಂಬಂಧವಿದೆ.

'ತಮಂಥವಕೇಡು' ಕಥೆಯಲ್ಲಿ ದುರುಗ ಅವನ ಹೆಂಡತಿ ಚೆಂದವ್ವ, ಮಗ ಚೆನ್ನನಿಗೂ ಮರಗಳೊಂದಿಗೆ ಬಿಡಿಸಲಾರದ ಬಂಧವಿದೆ. "ದೈವಕ್ಕೆ ಮೊದಲು ಶರಣೇಂಬೆವು" ಕಥೆಯಲ್ಲಿ ಪಾತಪ್ಪ ದೇವರು, ನಡುಗಡ್ಡೆಯ ಬದುಕು ಪ್ರಮುಖವಾಗಿ ಚಿತ್ರವಾಗಿದೆ.

ಹೀಗೆ ನುಗಡೋಣಿಯವರ ಕಥೆಗಳ ಸ್ತ್ರೀ ಮತ್ತು ಪುರುಷ ಪಾತ್ರಗಳು "ಸೋತವರ, ನೊಂದವರ, ತುಳಿತಕ್ಕೊಳಗಾದವರ ಅಂತರಂಗದ ದನಿಯಾಗಿವೆ." ದಲಿತರ ಜೀವನ ವಿಧಾನವು ಪಾತ್ರಗಳಿಂದ ನಿರೂಪಿತವಾಗಿದೆ. ಬಹುತೇಕ ಸಂದರ್ಭಗಳಲ್ಲಿ ಪಾತ್ರಗಳು ದುಃಖದಿಂದ ಬೆಂದರೂ ಸಹ ಜೀವನ ಪ್ರೀತಿಯ ಸೆಲೆಯಾಗಿ ಸ್ಫೂರ್ತಿ ನೀಡುತ್ತವೆ.

**ಅಡಿ ಟಿಪ್ಪಣಿಗಳು :**

೧. ಮಣ್ಣು ಸೇರಿತು ಬೀಜ ಸಂಕಲನ ಮುನ್ನುಡಿ

೨. ಅದೇ ಕಥೆ ಸಂಕಲನ, ಪುರುಷೋತ್ತಮ ಬಿಳಿಮಲೆ ಬರೆದ ಮುನ್ನುಡಿ

೩. ಹೊತ್ತು ಮೂಡುವ ಸಮಯ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೫೩

೪. ಅದೇ, ಪುಟ ೪೪

೫. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ : ಪುಟ ೧೪

೬ ಅದೇ, ಪುಟ ೧೩

೭ ಅದೇ, ಪುಟ ೨೫

೮. ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು ಕಥೆ, ಸವಾರಿ ಸಂಕಲನ, ಪುಟ ೨೦೩

೯. ಅದೇ, ಪುಟ ೨೦೪

೧೦. ಅದೇ, ಪುಟ ೨೦೬

೧೧. ಮಣ್ಣು ಸೇರಿತು ಬೀಜ ಕಥೆ, ಮಣ್ಣು ಸೇರಿತು ಸಂಕಲನ : ಪುಟ ೪

೧೨. ಅದೇ, ಪುಟ ೧೫

೧೩. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ : ಪುಟ ೧೧

೧೪. ಅದೇ, ಪುಟ ೨೨

೧೫. ಒಡಲುಗೊಂಡವರು ಕಥೆ, ಸವಾರಿ ಸಂಕಲನ : ಪುಟ ೧೫೧

೧೬ ಮನ್ನಿಸಿ ಮೂಕಾದ ಮೇಲೆ ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೧೨೦

೧೭ ಮಾತು ಮಂಥನ, ಡಾ. ಕೇಶವ ಶರ್ಮಾ ಸಂದರ್ಶನ, ಮಯೂರ ಪತ್ರಿಕೆ, ಜುಲೈ ೨೦೦೮

೧೮. ಮಣ್ಣು ಸೇರಿತು ಬೀಜ ಕಥೆ, ಮಣ್ಣು ಸೇರಿತು ಸಂಕಲನ : ಪುಟ ೮

೧೯. ಅದೇ ಪುಟ

೨೦. ಅದೇ ಪುಟ ೯

೨೧. ದಾರಿ ಮೂಡಿಸುವ ಹೆಜ್ಜೆಗಳು ಕಥೆ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೩೬

೨೨. ಹೊತ್ತು ಮೂಡುವ ಸಮಯ, ಮಣ್ಣು ಸೇರಿತು ಬೀಜ ಸಂಕಲನ : ಪುಟ ೩೯

೨೩. ಅದೇ, ಪುಟ ೫೨

೨೪. ತಮಂಧದ ಕೇಡು ಸಂಕಲನ : ಪುಟ ೪

ಅಧ್ಯಾಯ – ೬

# ಅಮರೇಶ ನುಗಡೋಣಿ ಕಥೆಗಳ ಭಾಷೆ ಮತ್ತು ಶೈಲಿ

ಒಂದು ಕೃತಿಯು ಪರಿಪೂರ್ಣವಾಗಲು ಸಾರ್ಥಕತೆ ಪಡೆಯಲು ಲೇಖಕಬಳಸಿರುವ ಭಾಷೆ ಮತ್ತು ಶೈಲಿ ಮಹತ್ವದ ಪಾತ್ರವಹಿಸುತ್ತದೆ. ಭಾಷೆಯು ಲೇಖಕನ ಅನುಭವಗಳನ್ನು ಅಭಿವ್ಯಕ್ತಿಗೊಳಿಸುವ ಮಾಧ್ಯಮವಾಗಿ ಬಿಂಬಿಸುತ್ತದೆ. ಸೃಜನಶೀಲ ಬರಹಗಳಲ್ಲಿ ಭಾಷೆ ಕಲಾತ್ಮಕವಾಗಿ ಉಪಯೋಗಿಸಲ್ಪಡುತ್ತದೆ. ಸಾಹಿತಿಯ ಭಾಷಾ ಶೈಲಿಯು ಅವರವರ ವ್ಯಕ್ತಿತ್ವಕ್ಕೆ ಜೀವನ ದೃಷ್ಟಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ. ಭಾಷೆ, ಶೈಲಿ, ತಂತ್ರಗಳು ಲೇಖಕನ ಜೀವನ ದರ್ಶನದೊಂದಿಗೆ ನಿಕಟ ಸಂಬಂಧ ಹೊಂದಿರುತ್ತದೆ. ಲೇಖಕ ತನ್ನ ಚೌಕಟ್ಟಿನೊಳಗೆ ವಸ್ತು, ಭಾಷೆ, ತಂತ್ರಗಳೊಡನೆ ನಿಕಟ ಸಂಬಂಧವನ್ನು ಸಾಧಿಸುತ್ತವೆ.

ಶೈಲಿಯೆಂದು ಒಬ್ಬ ಸೃಜನಶೀಲ ಲೇಖಕ ತನ್ನ ಅಂತರಾಳದ ಅನುಭವವನ್ನು ಕಲಾತ್ಮಕವಾಗಿ ಕಟ್ಟಿಕೊಡುವಾಗ ವ್ಯಕ್ತವಾಗುತ್ತದೆ. ಇದು ಲೇಖಕನ ಬದುಕಿನ ಸಾಚಾ ಅನುಭವಗಳನ್ನು ತನ್ನ ವ್ಯಕ್ತಿಗತ ನೆಲೆಯಲ್ಲಿ ಅಭಿವ್ಯಕ್ತಿಸುವ ತಂತ್ರವೂ ಹೌದು. ಹಾಗೆ ಬರಹದ ವಿಧಾನ ಕ್ರಮವೂ ಹೌದು. ಇದು ಎಲ್ಲಾ ಲೇಖಕರಲ್ಲಿ ಒಂದೇ ಬಗೆಯಾಗಿರುವುದಿಲ್ಲ. "ಒಂದು ಸಾಹಿತ್ಯ ಕೃತಿಯ ವಸ್ತು ಭಾಷೆ, ತಂತ್ರದ ನಿಜವಾದ ಅಧ್ಯಯನವೆಂದರೆ ಆ ಸಮಾಜದ ಒಟ್ಟು ಸಂಸ್ಕೃತಿಯ ಅಧ್ಯಯನ ಎಂದರ್ಥ.[೧]

ಶೈಲಿಯ ಕುರಿತು ದೇಜವರೇಗೌಡ 'ಭಾಷೆ, ಸಾಹಿತ್ಯ ಎರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಭಾಷೆಯಲ್ಲೇ ಸಾಹಿತ್ಯ ಉಗಮವಾಗುವುದು. ಭಾಷೆಯಿಂದ ಕಥೆಗಳ ಸನ್ನಿವೇಶ ಪಾತ್ರಗಳು ಓದುಗರ ಅರಿವಿಗೆ ಬರುವುದು' ಎಂದು ಅಭಿಪ್ರಾಯಿಸುತ್ತಾರೆ. ಶೈಲಿ ಪ್ರಧಾನವಾಗಿ ವಸ್ತುನಿಷ್ಠವಾಗಿರುವುದರಿಂದ ಸಮಷ್ಟಿಯ ಮೇಲೆ ಪ್ರಭಾವ ಬೀರುವುದಲ್ಲದೇ ಅದರಿಂದ ಪ್ರಭಾವಿತರಾಗುವಲ್ಲಿ ಇಪ್ಪಾರೆ. ಆದ್ದರಿಂದ ಶೈಲಿ ಬರಹಗಾರನ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ಸಾಧನವೂ ಹೌದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವೂ ಹೌದು.[೨]

ಕಥೆಗಾರನ ಭಾಷೆಯಲ್ಲಿ ಶಿಷ್ಟ ಭಾಷೆ ಮತ್ತು ಆಡುಭಾಷೆ ಎಂಬ ಎರಡು ಬೇಧಗಳಿವೆ. ಜನರು ತಮ್ಮ ಹಳ್ಳಿಗಳಲ್ಲಿ ಮನೆಯಲ್ಲಿ ಆಡುವ ಭಾಷೆಯನ್ನು ಕೇವಲ ವ್ಯವಹಾರಿಕವಾಗಿ ಬಳಸದೆ ಸಾಹಿತ್ಯದ ವಿಶಿಷ್ಟ ಅಭಿವ್ಯಕ್ತಿಯೂ ಭಾಷೆಯಿಂದ ಸಾಧ್ಯವಾಗಿವುಸ ಕಥೆಗಾರ ಪ್ರಯತ್ನಿಸುತ್ತಾನೆ.

ದಲಿತ ಕಥಾ ಸಾಹಿತ್ಯದ ವಿಶಿಷ್ಟತೆಗಳಲ್ಲಿ ಭಾಷೆ ಮತ್ತು ಶೈಲಿ ಗಮನಾರ್ಹವಾದುದು. ದಲಿತರ ರೂಪಿಸಿದ ಗದ್ಯವು ತಾಯ್ತನದ ಗದ್ಯ ಎಂಬಂತೆ ಇದು ನಿಜಕ್ಕೂ ಕನ್ನಡ ತಾಯಿ ಭಾಷೆ, ಸ್ತ್ರೀ ಸಂವೇದಿ ಭಾಷೆ. ಈ ಶೈಲಿ ದಲಿತ ಕೇರಿಗಳ ಜೀವನಾನುಭವಗಳು ಗದ್ಯದಿಂದ ಬಂದಿದೆ. ತಮ್ಮ ಅನುಭವಗಳನ್ನು

ನೋವು, ನಲಿವುಗಳನ್ನು, ಸೋಲು-ಸಂಕಟಗಳನ್ನು, ಹಸಿವು-ಬಡತನಗಳನ್ನು ಕಲೆಯನ್ನಾಗಿಸಿಕೊಳ್ಳಬಹುದು ಎಂಬ ಭರವಸೆಯನ್ನು ಹೊಂದಿದ್ದ ದಲಿತರು ಕನ್ನಡದ ಶಿಷ್ಟ ಸಾಹಿತ್ಯದಿಂದ ತಿರಸ್ಕೃತವಾದ ಜಾನಪದೀಯವು ಅಪ್ಪಟ ದೇಶಿಯ ಕನ್ನಡವನ್ನು ತಮ್ಮ ಬದುಕಿನ ಅನುಭವಗಳ ಮುಖಾಂತರವೇ ದಾಖಲಿಸಿದ್ದು, ಒಂದು ಸಾಧನೆಯೇ ಸರಿ.[3]

ದಲಿತರ ಜೀವನವಿಧಾನವನ್ನು ಇದ್ದಂತೆಯೇ ಕರಾರುವಕ್ಕಾಗಿ ತೋರಿಸಲು ನುಗಡೋಣಿಯವರು ಬಳಸಿಕೊಂಡ ಭಾಷೆಯ ಅಭಿವ್ಯಕ್ತಿ ಕ್ರಮ ಅನನ್ಯವಾದದ್ದು. ದಲಿತೇತರ ಲೇಖಕರು ದಲಿತ ಜಗತ್ತನ್ನು ಪ್ರವೇಶಿಸಿ ಅದರ ಅಂತಸತ್ವವನ್ನು ತೆರೆದಿಡುವಂತಹ ಪ್ರಾಮಾಣಿಕ ಪ್ರಯತ್ನವನ್ನು ನುಗಡೋಣಿಯವರು ಮಾಡಿದ್ದಾರೆ. ಇವರ ಕಥನದ ಅಭಿವ್ಯಕ್ತಿಗೆ ಶಿಷ್ಟ ಭಾಷೆಗಿಂತ ಜನಸಾಮಾನ್ಯರ ಆಡುಭಾಷೆಯನ್ನೇ ಬಳಸಿಕೊಂಡಿದ್ದಾರೆ. ರಾಯಚೂರು ಜಿಲ್ಲೆಯ ಹಳ್ಳಿಗಳ ಭಾಷೆಯ ಸೊಗಡು ಕಥೆಗಳ ತುಂಬಾ ಹಾಸುಹೊಕ್ಕಾಗಿದೆ. ಕೆಲವೆಡೆ ವ್ಯವಹಾರಿಕ ಆಡುಭಾಷೆಯೇ ಕಲಾತ್ಮಕವಾಗಿ ರೂಪುಗೊಂಡ ಅನನ್ಯತೆಯನ್ನು ಮೆರೆದಿದೆ.

ಅಮರೇಶ ನುಗಡೋಣಿಯವರು ಒಂದು ನಿರ್ದಿಷ್ಟ ಜೀವನ ಕ್ರಮದಲ್ಲಿ ಬದುಕುತ್ತಿರುವ ವ್ಯಕ್ತಿಗಳ ನೋವು ನಲಿವುಗಳನ್ನು ಅವರ ಭಾಷೆ ನುಡಿಗಟ್ಟುಗಳಲ್ಲಿಯೇ ಗ್ರಹಿಸಿ ನಿರೂಪಿಸಿದ್ದಾರೆ. ನುಗಡೋಣಿ ಪರ್ಯಾಯವಾಗಿ ಒಂದು ಪ್ರದೇಶದ ಜನಾಂಗದ, ಸಂಸ್ಕೃತಿಯನ್ನೂ ಭಾಷೆಯನ್ನೂ ಪ್ರತಿಫಲಿಸುವ ಮೂಲಕ ತಮ್ಮ ಕಥೆಗಳ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿದ್ದಾರೆ. ಒಂದು ಜೀವನ ಕ್ರಮವು ಮನುಷ್ಯನ ವರ್ತನೆಗಳನ್ನು ಪ್ರಭಾವಿಸಿ, ನಿರ್ದೇಶಿಸುವ ಹಲವು ಪ್ರಕರಣಗಳನ್ನು ಅವರು ಕಥೆಯಾಗಿಸಿ ಸಾಧಾರಣೀಕರಿಸಿರುವ ರೀತಿಯು ಅವರ ಪ್ರಬುದ್ಧತೆಗೂ, ಕಲೆಗಾರಿಕೆಗೂ ಸಾಕ್ಷಿಯಾಗಿವೆ.

"ದುರುಗನ ಹೆಂಡತಿ ಇರತನಕ ಆಕಿಗೆ ಮನೆಯೆಂಬುದೇ ಇರಲಿಲ್ಲ. ಮರಗಳ ಬುಡಕ ನಾರು ಕಾಲಿನ ಮ್ಯಾಗಹುಲ್ಲುಹೊರಿಸಿ ಗುಡಿಸಿಲಂಬೋ ಮನೆಯನ್ನ 'ನಮ್ಮದೂ' ಅಂತ ಒಂದ ಕೂನಕ್ಕಾಗಿ ಮಾಡಿಕೊಂಡಿದ್ದರು. ಸೂರಿಯ ಮೂಡಿದ ಗಳಿಗೆಯಿಂದ ಸೂರಿಯ ಮುಣಗ ತನಕ ಆಕೆಯ ಬದುಕೆಲ್ಲ ಆ ಮರಗಳ ಒಡಲೊಳಗೇ ನಡಿತಿತ್ತು. ಚೆನ್ನ ಬೆಳದದ್ದೇ ಆ ಮರಗಳ ಉಡಿಯಲ್ಲಿ. ಚೆಂದವ್ವ ಅದೆಷ್ಟು ಚೆಂದ ಹಾಡುತಿದ್ದಳೆಂದರೆ ಹೊತ್ತು ಮುಳಗಿದ ಮ್ಯಾಲೆ ಕೇರಿಯ ಆಸತ್ತ ಬ್ಯಾಸತ್ತ ಜೀವಗಳು ಚಂದವ್ವನ ಮರಗಳಿಗೆ ಬಂದು ಕುಂತು ಹಾಡು ಕೇಳಿ ನಿರುಮ್ಮಳ ಉಸಿರುಬುಟ್ಟು ನೆಮ್ಮದಿಯ ಉಸಿರು ತುಂಬಿಕೊಳ್ಳುತ್ತಿದ್ದವು"[4] ಇಲ್ಲಿ ಬಡವರ ಬದುಕೆಂಬುದು ಬಯಲು ಆಲಯವನ್ನೇ ಆಶ್ರಯಿಸಿದೆ ಎಂಬುದನ್ನು ಪರೋಕ್ಷವಾಗಿ ಹೇಳುತ್ತಾರೆ.

ಹಾಗೆಯೇ ಬದುಕಲ್ಲಿ ನೋವು-ನಲಿವುಗಳು, ಕಷ್ಟ-ನಷ್ಟಗಳ ನಡುವೆ ಅವರು ನಲಿವನ್ನು ಕಂಡವರು. ಮರಗಳು ಅವರ ಬದುಕಿನೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದವು ಎಂಬುದು ವ್ಯಕ್ತವಾಗುತ್ತದೆ. ಹಾಗೆಯೇ ಹಳ್ಳಿಯವರ ನೋವನ್ನುಂಡೇ ಕಥನ ಬರೆದವರು ಪಾಡನ್ನೇ ಹಾಡಾಗಿ ಮಾಡಿಕೊಂಡರು. "ಊರಿನಗೌಡನೊಬ್ಬ ಚೆಂದವ್ವನ ಹಾಡನ್ನು ಕುರಿತು ಚಂದವ್ವ ನಿನ್ನ ಪದಗಳು ನಮ್ಮ ಎದ್ಯಾಗಿನ ಚಿಂತೆನ್ನ ತಣ್ಣಗ ಮಾಡತಾವು! ಬದುಕಬೇಕು ಅದು ಹುರುಪ್ಪ ಮೂಡಿಸ್ತಾವ! ಅಂತಿದ್ದ. ಶಾಂತಗೌಡನೇ ನನ್ನ ಹೆಣ್ತಿಯಾಗಿ ಚಂದವ್ವ ಯಾಕ ಹುಟ್ಟಿಜಾರದಿತ್ತೆ? ಅಂತ ನೂರ ಸಲ ಅನಕಂಡಿದ್ದ. ಆ ಮ್ಯಾಲೆ ತಾಳಿ ಕಟ್ಟಿಸಿಕೊಳ್ಳಲಿಲ್ಲ. ಕರೇಕಲ್ಲಿನ ದೊಡ್ಡ ಮನ್ಯಾಗಿದ್ದು ಗೌಡಸಾನಿ ಅಂತ ಅನಿಸಿಕೊಳ್ಳಲಿಲ್ಲ. ಅಂಬೋದು ಬುಟ್ಟಾರೆ ಉಳಿದೆಲ್ಲ ವಿಷಯದಾಗ ಚಂದವ್ವ ಶಾಂತಗೌಡನ ಹೆಣ್ತಿಯೇ ಆಗಿಬುಟ್ಟಳು. ಹೋದ ಬಸ್ವಣ್ಣ ದೇವುರು ಜಾತ್ರಿಗೆ ಆ ಎರಡು ಮರಗಳನ್ನು ಕಡುದುನಾಕು ವರ್ಷ ಆಗಿದ್ದಾವು. ಆದರೆ ದುರುಗನಿಗೆ ನಿನ್ನ ಮೊನ್ನ ಅದಲ್ಲ ನಡದಂಗಿತ್ತು."[3] ಇದು ಅತ್ಯಂತ ಮಾರ್ಮಿಕವಾದುದು. ಜೀವನದ ನೋವು ನಿರಾಸೆಗಳನ್ನು ಮರೆಸುವ ಶಕ್ತಿ ದಲಿತ ಮಹಿಳೆಯ ಹಾಡಿನಲ್ಲಿದೆ ಎಂದು ಹೇಳುತ್ತಲೇ ದಲಿತರ ಬದುಕು ತಪ್ತತೆಯಿಂದ ಕೂಡಿತ್ತು ಎಂಬುದು ವ್ಯಕ್ತವಾಗುತ್ತದೆ.

ದಲಿತ ಕಥಾಲೋಕದ ನಿರೂಪನೆ ತುಂಬಾ ಪರಿಣಾಮಕಾರಿಯಾದು, ದಲಿತ ಕಥಾಲೋಕದ ಒಂದು ವೈಶಿಷ್ಟ್ಯ ಅಮರೇಶ ನುಗಡೋಣಿಯವರ ಭಾಷೆಯು ಭಾವಗೀತಾತ್ಮಕವಾಗಿದೆ. ಅವರು **'ದಾಳಿ ನಡೆದಾವೋ ಅಣ್ಣಾ'** ಕಥೆಯಲ್ಲಿ ಶಿವನಕೊಳ್ಳದ ವರ್ಣನೆಯನ್ನು ಭಾವನಾತ್ಮಕವಾಗಿ ಮರೆದಿದ್ದಾರೆ.

"ಎಂಥ ಚಂದದ ಶಿವನಕೊಳ್ಳ ಅದು! ಎಡಬಲಕ್ಕೆ ಹಬ್ಬಿರುವ ಬೆಟ್ಟಗಳ ನಡುವೆ ಜೋಗುಳದಲ್ಲಿ ಹರಿಯುವ ಹಳ್ಳ, ದಂಡೆ, ಗುಂಟ ಕಾಡಿನಂತೆಬೆಳೆದ ಮರಗಳು, ಬೆಳ್ಳನೆಯ ಉಸುಕಿನ ಹಾಸು, ತಿಳಿನೀರಿನ ಹರಿವು, ಹಕ್ಕಿ-ಪಕ್ಷಿಗಳ ಸಂಸಾರ, ಹಳ್ಳದಲ್ಲಿ ನಡುನಡುವೆ ಸಣ್ಣ ಸಣ್ಣ ದಿಬ್ಬಗಳು ಚಲುವಿನ ನೆಲೆಯಾದ ಅಲ್ಲಿ ಶಿವ, ಪಾರ್ವತಿ ಕೈಲಾಸದಿಂದ ಬಂದು ಕಾಲ ಕಳೆಯುತ್ತಿದ್ದರಂತೆ. ಅದನ್ನು ಕಂಡ ಶಿವ, ಪಾರ್ವತಿಯ ಮಗ ಕುಮಾರಸ್ವಾಮಿ ಮರಳಿ ಕೈಲಾಸಕ್ಕೆ ಹೋಗದೇ ಈ ಸರಹದ್ದಿನ ಬೆಟ್ಟವೊಂದರಲ್ಲಿ ನೆಲೆತಿಂತಂತೆ. ವನವಾಸಕ್ಕೆ ಬಂದ ರಾಮ-ಸೀತೆ, ಲಕ್ಷ್ಮಣ, ಹನುಮಂತ ಈ ಕೊಳ್ಳ ನೋಡಿ ಇಲ್ಲೇ ಕಾಲ ಕಳೆದರಂತೆ. ಪಾಂಡವರೂ ಇಲ್ಲೇ ಆಶ್ರಯ ಪಡೆದಿದ್ದರಂತೆ. ಯೋಗಿಗಳು ಇಲ್ಲೇ ಸಾಧನೆಗೆ ಬಂದು ತಂಗುತ್ತಿದ್ದರಂತೆ. ಮಲ್ಲಯ್ಯನ ತಂದೆ ಕಾಲದಲ್ಲಿ ಈ ಪ್ರಾಂತ್ಯದ ಮಹಾರಾಜರು ಶಿವನಕೊಳ್ಳದೊಂದಿಗೆ ಬಂದು ಕಾಲ ನೂಕುತ್ತಿದ್ದರಂತೆ. ಪರಂಗಿ ಜನರೂ ಈ ಕೊಳಳಕ್ಕೆ ಮಾರು ಹೋಗಿದ್ದರಂತೆ. ದೇಶ ಸುತ್ತುವವರು ಈ ಕೊಳ್ಳಕ್ಕೆ ಬಂದು ದಣಿವು ಆರಿಸಿಕೊಂಡು ಮುಂದೆ ಹೋಗುವುದನ್ನು ಮಲ್ಲಯ್ಯ ಕಂಡಿದ್ದ ಊರಿನ

ಜನರಿಗೆ ಶಿವನಕೊಳ್ಳ ಎಂದರೆ ಉಸಿರೇ ಆಗಿತ್ತು.[1]

ಹೀಗೆ ಹಳ್ಳಿಯ ಜನರ ಸಾಂಸ್ಕೃತಿಕ ನಾಡಿಮಿಡಿತವಾಗಿ ಶಿವನಕೊಳ್ಳ ನಿರೂಪಿತವಾಗಿದೆ. ಶಿವನಕೊಳ್ಳದೊಡನೆ ಜನರ ಬದುಕು ಬೆಸೆದು ಕೊಂಡಿದೆ. ಹೀಗೆ 'ಶಿವನಕೊಳ್ಳ' ಆ ಪ್ರದೇಶದ ಪೌರಾಣಿಕ, ಐತಿಹಾಸಿಕ, ಸಾಂಸ್ಕೃತಿಕ ಭವ್ಯತೆ ಶ್ರೇಷ್ಠತೆಯನ್ನು ಹೇಳುತ್ತಾರೆ. ಇದು ಮನುಷ್ಯರ ಸ್ವಾರ್ಥ ದುರಾಸೆಯಿಂದ ಶಿವನಕೊಳ್ಳ ಮುಂದೆ ಗಣಿಗಾರಿಕೆಯಿಂದ ನಿರೂಪಗೊಂಡು ಹೇಗೆ ಸಂಪೂರ್ಣವಾಗಿ ಹಾಳಾಯಿತು ಎಂಬುದನ್ನು ಕಣ್ಣಾರೆ ಕಂಡು ದುಃಖಿಸುವ ಮಲ್ಲಯ್ಯನ ಸಂಕಲ್ಪ ಲೇಖಕರ ಸಂಕಲ್ಪವೂ ಆಗಿದೆ. ಇಂತಹ ಕಥೆಯನ್ನು ನುಗಡೋಣಿಯವರು ಸಹೃದಯದ ಹೃದಯ ಸ್ಪರ್ಶಿಯಾಗಿ ನಿರೂಪಿಸುತ್ತಾರೆ.

'ತಮಂಥದಕೇಡು' ಕಥೆಯಲ್ಲಿ ಭೀಕರತೆ ಮಾನಸಿಕ ಹೊಯ್ದಾಟವನ್ನು ಅತ್ಯಂತ ಪರಿಣಾಮಕಾರಿಯಗಿ ಮೂಡಿಬಂದಿದೆ. ಮುಂದಾಗುವ ಅನಾಹುತಗಳ ಚಿತ್ರಣ ಮೂಡಿಬರುತ್ತದೆ. 'ಮುಗಿಲು ಕರಿಮೊಡಗಳಿಂದ ಮುಚ್ಚಿತ್ತು ಪಡುವಣದಾಗ ಮುಗಿಲು ನಿಚ್ಚಳ ಕಂಡಿತು.' ಆದ್ರ ಸೂರ್ಯ ಕಾಣಲಿಲ್ಲ. ಅಲ್ಲಿ ಬರೀ ಕೆಂಪು ಕಾಣುತ್ತಿತ್ತು ಎಂಬಲ್ಲಿ ದುರುಗನ ಮನಸ್ಸಿನ ಗೊಂದಲ, ಉದ್ವೇಗಗಳನ್ನು ಪ್ರಕೃತಿಯ ಸೂರ್ಯಾಸ್ತದ ಸನ್ನಿವೇಶದೊಡನೆ ಹೋಲಿಸುತ್ತಾರೆ. ನಂತರ ಪಡುವಣದಾಗ ಕರಿಮೋಡಗಳಿಗೆ ಸೂರಿಯನ ಕೆಂಪು ಬಣ್ಣ ತಗಲಿ ಅವು ಕೆಂಡ ಕೆಂಡವಾಗಿ ವಿಕಾರವಾಗಿ ಕುಂತಿದ್ದವು. ತುಂಗಾ ನದಿಯೂ ಸಹ ಅಭೀಕರ ದುರಂತಕ್ಕೆ ಸಾಕ್ಷಿ ಎಂಬಂತೆ ದುರುಗನಿಗೆ ತುಂಗಮ್ಮ ಕೆಂಪಗೆ ಕಂಡಳು ಯಾಕಂತ ಸಲುಪೊತ್ತು ನಿಂತ ನೋಡಿದ. "ಸೂರಿಯ ಮುಣಗುವಲ್ಲ ಕೆಂಪು ಮೊಡಗಳು ರಕುತದಾಗ ಅದ್ದಿಟ್ಟಂಗ! ಅದು ಸಮುದ್ರ ಕಂಡಂಗಾಯ್ತು ಸಮುದ್ರಾಗ ಜ್ವಾಲಾಮುಖಿ ಸಿಡದಂಗ ಚಿತ್ರ ಕಂಡಿತು!"[2] ಎಂದು ದುರಂತದ ಚಿತ್ರಣ ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತಾರೆ.

ಅಮರೇಶ ನುಗಡೋಣಿಯವರು ನೈಜ ಜೀವನಕ್ಕೆ ಸಮೀಪವಾದ ಸಂವೇದನಾಶೀಲ ಭಾಷೆಯನ್ನು ಕಥೆಗಳಲ್ಲಿ ಬಳಸುತ್ತಾರೆ. 'ಭಗವಾನ್' ಹೇಳುವಂತೆ ಅಮರೇಶರ ಭಾಷೆ ಭಾವಗೀತಾತ್ಮಕ ಮತ್ತು ಚಿತ್ರಾತ್ಮಕವಾಗಿರುವಂತೆ ಯತಾರ್ಥ ಬದುಕಿಗೆ ಹತ್ತಿರವಾದಂತಹ ಸಂವೇದನೆಯನ್ನು ಒಳಗೊಂಡಿರುವುದು ಒಂದು ವಿಶಿಷ್ಟ ಅಂಶವಾಗಿದೆ. "ಅನತಿ ದೂರದಲ್ಲಿದ್ದ ತೆಂಗಿನ ಗರಿಯ ಮೇಲೆ ದೊಡ್ಡ ಬೆಳ್ಳಕ್ಕಿಯೊಂದು ಕೂಡಲು ಪ್ರಯತ್ನಿಸುತ್ತಿತ್ತು ಅದು ರೆಕ್ಕೆ ಬಡಿಯುತ್ತಾ ನಿಧಾನವಾಗಿ ಆ ಗರಿಯ ಮೇಲೆ ಕೂಡುತ್ತಿದ್ದಂತೆ ಭಾರಕ್ಕೆ ಗರಿ ಬಾಗುತ್ತಾ ಬಾಗುತ್ತಾ ಕೆಳಗೆ ಬಗ್ಗುತ್ತಿತ್ತು. ಬೆಳ್ಳಕ್ಕಿ ಕೆಳಗೆ ಬೀಳುತ್ತದೊ ಎನ್ನುವಾಗಲೇ ಹಾರಿಬಿಡುತ್ತಿತ್ತು. ತೆಂಗಿನಗರಿ ಮತ್ತೆ ಮೊದಲಿನ ಸ್ಥಿತಿಗೆ ಬಂದು ನಿಲ್ಲುತ್ತಿತ್ತು. ತುಸು ಸಮಯದ ಮೇಲೆ ಆ ಪಕ್ಷಿ ಅದೇ ಗರಿಯನ್ನು ಸಮೀಪಿಸಿ ಕೂಡಲು ಯತ್ನಿಸಿದಾಗ ಅದು ಮೊದಲಿನಂತೆಯೇ ಆದಾಗ ಪಕ್ಷಿ ಮೇಲಕ್ಕೆ ಹಾರಿತ್ತು. ಆ ಕ್ರಿಯೆ ಹಾಗೆಯೇ ಮತ್ತೆ ನಡದೇ ಇತ್ತು. ಶಿವಯ್ಯ ಅದನು ನೋಡುತ್ತಾ

ನಿಂತ" ಈ ಉದ್ಧರಣೆ ಬಯಲು ಆಲಯದೆಡೆಗೆ ಕಥೆಯಲ್ಲಿ ಬರುತ್ತದೆ. ಇದು ಈ ಸಂಕಲನ ಅತ್ಯಂತ ಚಿಕ್ಕ ಕಥೆ. ಇಲ್ಲಿ ವ್ಯಕ್ತವಾಗುವ ಜೀವನ ಶ್ರದ್ಧೆ, ಹೆಮ್ಮೆಯ ನಿಷ್ಠೆ ಹಾಗೂ ಇನ್ನೊಬ್ಬರ ಅಡಿಯಾಳುತನದಿಂದ ಬಿಡುಗಡೆ ಪಡೆಯುವ ಒಲ್ಮೆ ಶಕ್ತವಾಗಿ ಬಂದಿದೆ.[5] ಈ ಪ್ರಸಂಗ ಶಿವಯ್ಯನ ಬದುಕಿಗೆ ಅನ್ವಯಿಸುತ್ತದೆ.

ಬಯಲು ಆಲಯ ಕಥೆಯಲ್ಲಿ ಗುಲಾಮಗಿರಿಯ ಬದುಕಿನ ಸಂಕೋಲೆಯಿಂದ ಮುಕ್ತಿ ಪಡೆಯುವ ಹಂಬಲದಲ್ಲಿರುವ ಶಿವಯ್ಯ ಹೊಸ ಬದುಕಿಗಾಗಿ ದುಡಿಯುತ್ತಾ ಕಳೆದುಕೊಂಡ ಸುಖ ಕಾಮನೆಗಳತ್ತ ಹೊರಳುವ ಸನ್ನಿವೇಶ ಅರ್ಥವಾಗಿ ಚಿತ್ರಿಸಿದ್ದಾರೆ.

ಶಿವಯ್ಯ ಸಂಸಾರವನ್ನು ತ್ಯಜಿಸಿ ತೋಟದ ಆಳಾಗಿ ದುಡಿಯುತ್ತಿದ್ದ ಶಿವಯ್ಯನಿಗೆ ಈ ದೃಶ್ಯ ಮನಸ್ಸನ್ನು ಕದಡಿದ ಪರಿಯನ್ನು ಲೇಖಕರು ಯಥಾವತ್ತಾಗಿ ಹೇಳುತ್ತಾರೆ. ಕೆಳವರ್ಗದ ಹಳ್ಳಿಯ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುತ್ತಾರೆ. ತಮ್ಮ ಬದುಕಿನ ಅನುಭವಗಳನ್ನು ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಚೌಕಟ್ಟಿನಲ್ಲೇ ಅರ್ಥೈಸುತ್ತಾರೆ. ದುರಂತ ಮತ್ತು ತಲ್ಲಣಗಳನ್ನು ಸಹನೆಯಿಂದಲೇ ನಿರುದ್ವೇಗದಿಂದಲೇ ನಿರೂಪಿಸುತ್ತಾರೆ. ಅತಿಯಾದ ಭಾವುಕತೆ ಎಲ್ಲಿಯೂ ಕಂಡುಬರುವುದಿಲ್ಲ.

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಉಳ್ಳವರ ಭಾಷೆಯೇ ಬೇರೆ, ದೀನರ ಭಾಷೆಯೇ ಬೇರೆ. ಉಳ್ಳವರ ಭಾಷೆಯಲ್ಲಿ ದರ್ಪ, ಕ್ರೌರ್ಯ, ಗಡಸುತನ ಕಂಡು ಬಂದರೇ ದಲಿತರ ಭಾಷೆಯಲ್ಲಿ ಸೌಜನ್ಯತೆ, ವಿನಯ, ದೈನ್ಯತೆ ಕಂಡುಬರುತ್ತದೆ.

'ತಮಂದದ ಕೇಡು' ಕಥೆಯಲ್ಲಿ ಶಾಂತಗೌಡನು ಗೌಡನಾದರೂ ಸ್ವಲ್ಪ ಮಾನವೀಯತೆಯಿಂದ ವರ್ತಿಸಿದರೆ ಆತನ ಅಕ್ಕ ರುದ್ರಮ್ಮಳ ಭಾಷೆ ಗತ್ತಿನಿಂದ ಕೂಡಿದೆ. "ಶಾಂತಪ್ಪ ಸುದ್ದಿನಾಕ ಮಂದಿ ಬಾಯಿಗೆ ಹೋಗದು ಬ್ಯಾಡ! ಪಾಪ ಅಕ್ಕಮ್ಮ ಏನೋ ಮನಸ್ಸು ಕೊಟ್ಟಾಳ ಅದಕ್ಕೇನು ತಿಳಿತಾದ? ನಮ್ಮ ಮರ್ಯಾದಿ, ಮನೆತನದ ಗೌರವವನ್ನ ನಾವು ಕಾಪಾಡಿಕೊಳ್ಳಬೇಕು. ನೋಡು ಇದನ್ನ ಬೆಳೆಸದು ನನಗಿಷ್ಟಯಿಲ್ಲ. ಈ ವಾರದಾಗ ಅವ್ವನು ಊರಿಗೆ ಬರ್ತಾನ. ಕಾಯ್ದುಕೊಂಡು ನೋಡಿ ನನ್ಗ ಬಂದು ಹೇಳು. ಚೆನ್ನನ್ನ ಕರೆಸಿ, ಸಣ್ಣಾಗಿ ಕಡಿಸಿ ತುಂಗಮ್ಮನಲ್ಲಿ ಚೆಲ್ಲಿಸಿ ಬಿಡ್ತೀನಿ! ಏನ? ಆ ಮ್ಯಾಲೆ ಜಲ್ಲಿ ಅಕ್ಕಮಮ್ಮನ ಈ ಮನೆಗೆ ಸೊಸೆಯನ್ನಾಗಿ ಮಾಡ್ಕೆಂತೀನಿ. ನೀನು ಇವತ್ತು ಊರಿಗೆ ಹೋಗಿಬಿಡು. ಚನ್ನ ಬಂದರ ನಗ್ಗ ಸುದ್ದಿ ತಿಳಿಸು" ಎಂದು ರುದ್ರಮ್ಮ ಹೇಳುತ್ತಾಳೆ.[6]

'ಪಕ್ವಕ್ಕಲ್ಲದೇ ಪರಿಣಾಮ ಕಾಣಸದು' ಕಥೆಯಲ್ಲಿ ಗೌಡನ ಮಾತಿನಲ್ಲಿರುವ ದರ್ಪವು ಫ್ಯೂಡಲ್ ವ್ಯವಸ್ಥೆಯನ್ನು ಪ್ರತಿನಿಧಿಸಿದರೆ ಚಂದ್ರಪ್ಪನ ಭಾಷೆ ಫ್ಯೂಡಲ್ ವ್ಯವಸ್ಥೆಗೆ ಪ್ರತಿಕಾರದಂತೆ ಕಂಡು ಬರುತ್ತದೆ.

ವಿಶೇಷವೆಂದರೆ ಅಧಿಕಾರಶಾಹಿ ಎನ್ನುವುದು ಬಂಡವಾಳಶಾಹಿಯನ್ನು ರಕ್ಷಿಸುತ್ತಾ ಬಡವರನ್ನು ಪರೋಕ್ಷವಾಗಿ ಶೋಷಿಸುತ್ತದೆ ಎಂಬ ನಂಬಿಕೆಯು ಇಲ್ಲಿ ಹುಸಿಯಾಗಿದೆ. ಸ್ವತಃ ಪೋಲಿಸ್ ಅಧಿಕಾರಿಯೇ ಗೌಡನ ನೀತಿಯನ್ನು ನಯವಾಗಿ ವಿರೋಧಿಸುತ್ತಲೇ ಜೀವಪರ ಕಾಳಜಿಯತ್ತ ಯೋಚಿಸುವುದನ್ನು ಸೃಷ್ಟಿಪಡಿಸುತ್ತದೆ.

"ಗೌಡ್ರೇ, ನಾನು ಪೋಲಿಸ್ ಅಧಿಕಾರಿಯಾಗಿ ನಿನ್ನ ರಕ್ಷಣೆ ಕೊಡ್ತೀನಿ ಆದ್ರೆ ಒಂದು ಮಾತು ಹೇಳ್ತೀನಿ ಪೋಲಿಸ್ ಅಧಿಕಾರಿಯಾಗಿಯಲ್ಲ. ನಿನ್ನ ಆಪ್ತನಾಗಿ ಅಂತ ತಿಳಕೊಳ್ಳಬೇಕು. ನಿಮ್ಗೆ ನೂರಾರು ಎಕರೆ ಭೂಮಿ ಇದೆ. ಕಾನೂನು ಪ್ರಕಾರ ಆಸ್ತಿ ಮಾಡುವ ಹಕ್ಕು ವ್ಯಕ್ತಿಗಳಿಗೆ ಇದೆ. ಆದ್ರೆ ನಿಮ್ಮ ಮಕ್ಕಳು ಒಳ್ಳೆ ಸ್ಥಿತಿಯಲ್ಲಿದ್ದಾರೆ. ಈ ನಿಮ್ಮ ಭೂಮಿಯ ಎಡ್ರನ್ನ ಅವರಿಗೆ ಕೇವಲ ಅನ್ನಿಸಬಹುದು. ಅವರಿಗೆ ನಿಮ್ಮ ಈ ಭೂಮಿ ಮ್ಯಾಲೆ ಗಮನ ಇಲ್ಲ. ಆಶೆನೂ ಇಲ್ಲ. ಜಮೀನ್ದಾರರ ವಿರುದ್ಧ ಹೋರಾಡುವ ಗುಂಪಿನವರ ವಿಧಾನದ ಬಗ್ಗೆ ಸರಕಾರ ವಿಚಾರ ಮಾಡ್ತದ ಅದು ಬೇರೆ ವಿಚಾರ. ನೀವು ಬಡವರಿಗೆ ತಕ್ಕಮಟ್ಟಿನ ಭೂಮಿಹಂಚಿಬಿಡಿ. ಈಗ ಬಂದಿರುವ ಅಪಾಯ ತಪ್ಪುತ್ತದೆ. ಲೋಕಕ್ಕೆ ನಿಮ್ಮಿಂದ ಒಳ್ಳೆಯ ಕಾಣಿಕೆನೂ ಸಲ್ಲುತ್ತದೆ ಎಂದು ಹೇಳಿದ."[೨೦]

'ದಾರಿ ಮೂಡಿಸುವ ಹೆಜ್ಜೆಗಳು' ಮತ್ತು 'ಮಣ್ಣು ಸೇರಿತು ಬೀಜ' ಕಥೆಯಲ್ಲಿ ಕೆಳವರ್ಗದ ಗ್ರಾಮೀಣ ಭಾಷೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಉದಾಹರಣೆಗೆ "ಏನು ವಾಣ್ಣಾಗಿ ನಡೆದಾದೋ ಮಣ್ಣು! ನನಹಾಲ್ಯಾ ಮಗಳು ಮಾದೇವಿ ಮೈಸೆರ್ತು ನಾಕವರ್ಸ ನಾಳೆ ಎಳ್ಳೆಮಾಸಿಗೆ ದಾಟತಾವ. ಅವುಳ್ಗೀಟು ಕುತ್ತಿಗ್ಗೆ ತಾಳಿ ಕಾಣ್ಸಿದ್ರ ಮುಗೀತುನೋಡು, ಭೀಮಾ! ನಾನು ನನ್ನ ಮಗ ರಾಜಪ್ಪ ಎಂಗನ್ನ ಬದುಕು ನೂಕುತ್ತೀವಿ. ಅವುನು ಸಾಲ್ಯಾಗ ಬಲು ಸ್ಯಾಣ್ಯಾನಂತಲೋ ಮನ್ನೆ ಸಿರಿವಾರ ಸಂತಿಗೆ ಹೋದಾಗ ಸಾಲಿಕಡೆ ಹೋಗಿ ಮಾಸ್ತರಪ್ಪನೊರನ್ನ ಕಂಡಾಗ, 'ನಿನ್ನ ಮಗ ಕ್ಲಾಸಿಗೆ ಪಸ್ಟು, ಅವುನ್ನ ಮುಂದ ಬುಡದಂಗ ಓದ್ಸವ್ವ' ಅಂದ್ರು. 'ಯಪ್ಪ ನೀವೇ ಅವುನ್ನ ಮುಂದ ತರಬೇಕ್ರಿ, ಹೋಡಿರಿ, ಬಡಿರಿ ನಂದೇನು ತಕರಾರಿಲ್ಲ. ಅವುನಮ್ಯಾಗ ನಿಗಾಯಿತ್ರಿ' ಎಂದು ಹೇಳಿದ ತಿಮ್ಮಕ್ಕನ ಮಾತಿನಲ್ಲಿ ಅವಳ ಭಾಷೆ, ಶಿಕ್ಷಣದಿಂದ ವಂಚಿತವಾಗಿರುವ ಉತ್ತರ ಕರ್ನಾಟಕದ ಪ್ರಾದೇಶಿಕ ಧ್ವನಿಯಾಗಿ ಅಮರೇಶರ ಅಭಿವ್ಯಕ್ತಿಯಿದೆ."[೨೧]

ಹಾಗೆಯೇ, 'ಮಣ್ಣ ಸೇರಿತು ಬೀಜ' ಕಥೆಯಲ್ಲಿ ನಾಗಮ್ಮನು, ಜಂಬಣ್ಣನಿಗೆ ಹೇಳಿದ ಮಾತೂ ಕೂಡ ಕೆಳವರ್ಗದ ನೋವಿನ ಧ್ವನಿಯಾಗಿದೆ. ಆ ಪ್ರದೇಶದಲ್ಲಿನ ಅವಿದ್ಯಾವಂತರ ಭಾಷೆಯ ಶೈಲಿ, ಆಧುನಿಕ ಶೈಲಿಯ ಭಾಷೆಗಿಂತ ತೀರಾ ಭಿನ್ನವಾದುದಾಗಿದೆ. ಈ ಕೆಳಗಿನಂತೆ ಉದಾಹರಿಸಬಹುದು.

"ಯಣ್ಣ ನಂದು ಸಂತೆ ಮುಗ್ಯಾಕ ಬಂದಾದ ನೀನನ್ನ ಪರಾಮರಕಿ ಮಾಡಿದ್ದ. ನಂತಾಕ ಬೇಕಾದೊಟಿತ್ತು. ಎಲ್ಲ ಕನಸಿನಂಗ ಕರಗಿ ಹೋಯ್ತು. ತಿಕ್ಕ ಗೆಯ್ಯಪ್ಪಗ ಹೆಣ್ಣು ಹುಡುಕ್ಯಾಡಿ ಒಂದು ಮದಿವಿ ಮಾಡಿದ್ರ ಮಗ ಬೇಸಾತನಂತ ಊರಾಗಿನ ಮಂದಿ ಅಂದ್ರ ಬೇಸಾತನಂಬ ಭ್ರಮ್ಯಾಗ ನಾ ಹಾಳಾದೆ. ಗೌಡ ಹದ್ದಿನಂಗ ಕಣ್ಣಾಕ್ಯಾನ ! ಹೆಣ್ಣು ಕೊಡದಂಗ ಮಾಡ್ಡ. ಯಾಕಂದ್ರ ಮುಂದ ಆಸ್ತಿ ನುಂಗಾಕ ಬೇಕಲ್ಲ? ವಂಶ ಬೆಳಿಬಾರದು ಅಂಬ ಕೆಟ್ಟಹುಳ ಅದು. ನೀ ಮನ್ಯಾಗಿದ್ರು ಕೊಡೋದು ತಗಂಬದ್ರಾಗ ನಿನ್ನ ಮುಂದ ಮಾಡ್ಲಿಲ್ಲ. ಕಾಳುಕಡಿ ಎಲ್ಲ ಹೋದವು. ಗುಂಡಿನ ಹೊಲ, ನಡುಗಡ್ಡೆ ಹೊಲ, ಈ ಮನಿ ಉಳುದಾವ ಇದೀಟು ತಗಂಡು ಗಯ್ಯಪ್ಪನ್ನ ಸಲುವು. ನಾ ಮಂದಿಗೆ ಕೊಟ್ಟ ಸಾಲ ಮರಳಿ ಬರಂಗಿಲ್ಲ. ನೀ ಕೇಳಾಕು ಹೋಗ್ಬ್ಯಾಡ. ಆದ್ರ ಒಂದು ಮಾತು ನೆಪ್ಪಿಟ್ಟಿರು ಈ ಊರಾಗ ಗೌಡ್ರು ಗೀಡ್ರು ನಿನ್ಗ ಸಹಾಯ ಮಾಡ್ತೀವಿ ಅಂತ ಬಂದ್ರ ನೀ ಯಾರ ಕೈಗೆ ಸಿಗದೆಂಗಿರು ಅಂಗೇನಾದ್ರು ಅವುರು ಮಾತು ಕೇಳಿ ಹೋದ್ರ ನಿನ್ನ ಕತೆ ಮುಗಿತಂತ ತಿಳಿ. ಎಂಟೆದೆಯವುರು ಬಂದ್ರೂ ನೀ ಊರು ಬಿಡಬ್ಯಾಡ! ಇದೇ ಊರಾಗ ಹೊಲಮನಿ ಮಾಡ್ಕಂಡಿರು. ಈ ಮಾತು ನೆಪ್ಪಿಟ್ಟುಕೊಂಡು ಬಾಳಿವಿ ನೆಡೆಸು."[೨೨] ಈ ಮೇಲಿನ ೨ ಕಥೆಯಲ್ಲಿ ನುಗಡೋಣಿಯವರ ನಿರೂಪಣಾ ತಂತ್ರ, ಪ್ರಾದೇಶಿಕ ಆಡುಭಾಷೆಯ ಪ್ರಭಾವಶೈಲಿ ಬಳಕೆ, ಸರಳ, ಸಹಜ ಕಥಾತಂತ್ರ, ನಾಗಮ್ಮ ಮತ್ತು ತಿಮ್ಮಕ್ಕನ ಭಾಷೆಯು ಹಳ್ಳಿ ಜನರಲ್ಲಿ ಬೆರೆತಿರುವ ನಿತ್ಯದ ಆರು ನುಡಿಗಳನ್ನೇ ಪ್ರಾಮಾಣಿಕವಾಗಿ ತಮ್ಮ ಕಥೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಡಾ. ಹೆಚ್.ಎಸ್. ರಾಘವೇಂದ್ರರಾವ್ ಅವರು ಹೇಳಿರುವಂತೆ "ನುಗಡೋಣಿಯವರ ಕಥೆಗಳು ಉಪಭಾಷೆಯದು ತೆಲುಗು, ಕನ್ನಡಗಳ ದ್ವಿಭಾಷಿಕತೆಯೇ ವಿನಃ ಕನ್ನಡ ಉರ್ದುಗಳದಲ್ಲ. ಅವರ ಕಥೆಗಳ ಭೌಗೋಳಿಕ ಪರಿಧಿ ವಿಸ್ತರಿಸಿದಾಗ ಇದು ಬದಲಾಗಬಹುದು. ಅಲ್ಲದೆ ಸಾಂಸ್ಕೃತಿಕವಾದ ಇತಿಹಾಸವನ್ನು, ತನ್ಮೂಲಕ ಶಬ್ದಕೋಶವನ್ನು ಪಡೆಯದ ಉಪಭಾಷೆಯಲ್ಲಿ ವೈಚಾರಿಕತೆಯನ್ನು ಒಡಮೂಡಿಸುವುದು. ಹಾಗೆಯೆ ಸಮಸ್ಯೆಯನ್ನು ಉಪಭಾಷೆಗೆ ಅಂಟಿಕೊಳ್ಳುವ ಕಥೆಗಾರರು ಎದುರಿಸಬೇಕಾಗುತ್ತದೆ. ಕಥೆಯ ಒಡಲಿನಿಂದಲೇ ಮೂಡಿಬರುವ ವಿಚಾರಗಳಿಗಿಂತ ಅಲಾಯದವಾದ ವೈಚಾರಿಕತೆಯನ್ನು ತರಲು ಶಿಷ್ಟ ಭಾಷೆ ಅನಿವಾರ್ಯವಾಗಬಹುದೇನೋ. ತಮ್ಮ ಕಥೆಗಳ ಚೌಕಟ್ಟಿನೊಳಗೆ 'ವಿದ್ಯಾವಂತ' ಪಾತ್ರಗಳನ್ನು ತಂದು ಕೊಂಡಾಗ ಅಮರೇಶರಿಗೆ ಈ ಸವಾಲು ಎದುರಾದೀತು. ಹಾಗೆ ನೋಡಿದರೆ 'ನೀರು ತಂದವರು' ಕಥೆಯ ಎರಡು ಪೀಳಿಗೆಗಳ ನಡುವಿನ ಸಂವಹನವು ಕುಸಿದಿರುವುದಕ್ಕೆ ಸಮಾನವಾದ ಭಾಷೆಯ ಕೊರತೆಯ ಕಾರಣವಿರಬಹುದು. ಪುರುಷೋತ್ತಮನು ಸುಂಕವ್ವನೊಂದಿಗೆ ಯಾವ ಭಾಷೆಯಲ್ಲಿ ಮಾತನಾಡಬೇಕು ಎನ್ನುವುದು ಬರಿಯ ಅಕಡಮಿಕ್ ಆದ ಪ್ರಶ್ನೆಯಲ್ಲ."[೨೩] ಹೀಗೆ

ಅಮರೇಶ ನುಗಡೋಣಿಯವರ ಕಥೆಯಲ್ಲಿ ತಮ್ಮ ಕಲಾತ್ಮಕತೆ, ಸರಳ ಶೈಲಿಗೆ ಧಕ್ಕೆ ಉಂಟಾಗುವಂತಹ ವಿಧಾನವನ್ನು ಅವರು ಕಥೆಯಲ್ಲಿ ರೂಪಿಸಿಕೊಂಡಿಲ್ಲ ಎಂದು ಹೇಳಿದ್ದಾರೆ.

ನುಗಡೋಣಿಯವರೇ ಡಾ. ಕೇಶವ ಶರ್ಮ ಅವರ ಮಾತು ಮಂಥನ ಸಂದರ್ಶನದಲ್ಲಿ 'ನಿಮ್ಮ ಕಥೆಗಳಲ್ಲಿ ಸಾಮಾಜಿಕ ಸಂಬಂಧವೆಂದರೆ ಗ್ರಾಮ ಜೀವನ, ಆದರೆ ವಿದ್ಯಾವಂತರ, ನೌಕರಸ್ಥರ, ನಾಗರೀಕ ಪ್ರಪಂಚ ನಿಮ್ಮ ಕಥೆಗಳಲ್ಲಿ ಬರುವುದಿಲ್ಲ. ಏನು ಕಾರಣ' ಎಂದು ಕೇಳಿದರೆ "ಈ ಪ್ರಾಂತ್ಯದ ಚರಿತ್ರೆ ಗಮನಿಸಿ ಬಹುಮನಿಗಳು, ಆದಿಲ್‌ಶಾಹಿಗಳು, ಮೊಗಲರು, ಪೇಶ್ವೆಯವರು ಕೊನೆಗೆ ಬಂದ ನಿಜಾಮರು ಈ ಪೇಶ್ವೆಯವರು ಕೊನೆಗೆ ಬಂದ ನಿಜಾಮರು ಈ ಪ್ರಾಂತ್ಯದಲ್ಲಿ ರಾಜ್ಯವಾಳಿದ್ದರಿಂದ ಕನ್ನಡ ಮತ್ತು ಇಂಗ್ಲೀಷ್ ಭಾಷೆ ರಾಜ್ಯಾಡಳಿತದಲ್ಲಾಗಲಿ, ಶಿಕ್ಷಣದಲ್ಲಾಗಲಿ ನಲೆಯೂರಲಿಲ್ಲ. ಪಾರ್ಸಿ, ದಖನಿ ಮತ್ತು ಊರ್ದು ಭಾಷೆಗಳೇ ನೆಲೆಗೊಂಡಿದ್ದವು. ನಿಜಾಮರ ಕಾಲದಲ್ಲಿ ಉರ್ದು ಭಾಷೆಯನ್ನೇ ದೇಶಿಭಾಷೆಯನ್ನಾಗಿ ನೆಲೆಗೊಳಿಸಲು ರಾಜಕೀಯ ಇಚ್ಛಾಶಕ್ತಿ ಬಲಗೊಂಡಿತ್ತು. ನಿಜಾಮರು ಆಧುನಿಕ ಶಿಕ್ಷಣ ಪದ್ಧತಿಯನ್ನು ಒಪ್ಪಿಕೊಂಡಿದ್ದರು. ಅದನ್ನು ಉರ್ದು ಭಾಷೆಯಲ್ಲೇ ಕಲಿಸಲು ಬೋಧಿಸಲು ಸಾಕಷ್ಟು ಶ್ರಮಿಸಿದರು. ಈ ಪ್ರಾಂತ್ಯದಲ್ಲಿ ವಿದ್ಯೆ ಕಲಿಯುವ ವರ್ಗ ಉರ್ದು ಭಾಷೆಯಲ್ಲೇ ಕಲಿತರು ಬಹಳ ಮುಖ್ಯವಾಗಿ ಬ್ರಿಟಿಷ್ ಆಧುನಿಕತೆ ಅಥವಾ ಇಂಗ್ಲೀಷ್ ಭಾಷೆಯ ಮೂಲಕ ಅನೇಕ ಜ್ಞಾನ ಶಿಸ್ತುಗಳ ಅಧ್ಯಯನದಿಂದ ಪಶ್ಚಿಮದ ಆಧುನಿಕತೆಯನ್ನು ಅರಿಯಲು ಸಾಧ್ಯವಾಗಲಿಲ್ಲ. ಈ ಪ್ರಾಂತ್ಯದ ವಿದ್ಯಾವಂತರಿಗೆ ಶೈಕ್ಷಣಿಕ ಚಟುವಟಿಕೆಗಳು ಹೆಚ್ಚು ಬೆಳೆಯಲಿಲ್ಲ. ಉದ್ದಿಮೆಗಳೂ ಈ ಪ್ರಾಂತ್ಯದಲ್ಲಿ ಹುಟ್ಟಿ ಬೆಳೆಯಲಿಲ್ಲ. ಹೀಗಾಗಿ ಆಧುನಿಕ ನಾಗರೀಕ ಜೀವನಶೈಲಿ ಹೈದಾರಾಬಾದ್ ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ಪಡೆಯಲಿಲ್ಲ. ಜನರು ಆಧುನಿಕರಾಗುವುದಿರಲಿ ಆಧುನಿಕ ಸೌಲಭ್ಯಗಳೂ ಜನರಿಗೆ ತಲುಪಿಲ್ಲ. ೧೦ ವರ್ಷಗಳಿಂದ ಈಚೆಗೆ ಜಾಗತೀಕರಣದ ಪರಿಣಾಮವಾಗಿ ಮೊಬೈಲ್ ಹಿಡಿದು, ಪೆಪ್ಸಿ, ಕೊಕ್ ಕುಡಿಯುವವರ ಸಂಖ್ಯೆ ಜಾಸ್ತಿ ಆಗಿದೆ. ಇದನ್ನು ಕಾಲೇಜು ವಿದ್ಯಾರ್ಥಿಗಳು, ಕೂಲಿಕಾರರು, ರಸ್ತೆ ಮೇಲಿನ ವ್ಯಾಪಾರಿಗಳು, ಕುರಿ ಕಾಯುವವರು ಮಾಡುತ್ತಾರೆ. ಇವರು ನನ್ನ ಪ್ರಕಾರ ಆಧುನಿಕರಲ್ಲ. ನಾನೇನು ಹೇಳ್ತಿದ್ದಿನಿ ಅಂದ್ರೆ ಹೈದರಾಬಾದು, ಕರ್ನಾಟಕ ಪ್ರಾಂತ್ಯವೇ ಹಳ್ಳಿತನದಿಂದ ಕೂಡಿದೆ. ಆಧುನಿಕ ಶೈಲಿಯ ಜೀವನ ವಿಧಾನ ತೀರಾ ಕಮ್ಮಿ ಇದು. ಇರಲಿ ನಾನೇ ಹಳ್ಳಿಗ ನನ್ನ ಹೆಂಡತಿ, ಮಗನನ್ನನ್ನು 'ಹಳ್ಳಿ ಮನುಷ್ಯನಂಗ ಇದ್ದಿದ್ದಿ ನೋಡು' ಎಂದು ಕಾಮೆಂಟ್ ಮಾಡ್ತಾರ. ನಾನೂ ಹಳ್ಳಿಯಲ್ಲೇ ಹುಟ್ಟಿ ಬೆಳೆದ ಕಾರಣ ಹಳ್ಳಿತನ ಮೈಗೂಡಿದೆ. ನನ್ನ ಕಥೆಗೆ ಇದೂ ಕಾರಣವಾಗಿರಬೇಕು" ಎಂದು ತಮಗಿರುವ ಪ್ರಾದೇಶಿಕ ಪ್ರೀತಿಯನ್ನು, ಭಾಷೆಯ ಮೇಲಿನ ನಂಬಿಕೆಯನ್ನು ಅತ್ಯಂತ ಆತ್ಮವಿಶ್ವಾಸದಿಂದ ನನ್ನ ಮೇಲಿನ ಕಥನ ಸಾಹಿತ್ಯದಲ್ಲಿ ಆಧುನಿಕತೆ ಬಂದಿತು. ಜಾಗತೀಕರಣದಿಂದ ನನ್ನ ಪ್ರಾಂತ್ಯವು ಆಧುನಿಕವಾದೀತು"[೧೪] ಎಂದು ಹೇಳಿದ್ದಾರೆ.

ಅಷ್ಟೇ ಅಲ್ಲದೆ ಅವರನ್ನು ಅವರ ಭಾಷೆಯು ಕುರಿತು "ನೀವು ಹಳ್ಳಿಗಾಡಿನ (ಡಯಲೆಕ್ಟ್) ಭಾಷೆಯಲ್ಲಿ ಯಾಕೆ ಕಥೆಯನ್ನು ಬರೆಯುತ್ತೀರಿ ಎಂದು ಕೇಳಿದರೆ ನುಗಡೋಣಿಯವರು, "ನಾನು ಬಳಸುವ ಭಾಷೆ ಹಳ್ಳಿಗಾಡಿನದೇ? ಅಥವಾ ಅದು ನನ್ನ ಕನ್ನಡ ಅಲ್ಲವೆ? ಅಂತ ಯೋಚನೆ ಶುರುವಾಗುತ್ತಲೆ ಆಯಾ ಕಥೆಗಾರ ತನ್ನ ಕಥೆಗೆ, ಕಥೆ ಕೇಳುವ ಭಾಷೆಯಲ್ಲಿ ಬರೆಯುತ್ತಾನೆ. ಅಂದರೆ ಕಥೆಯೇ ಭಾಷೆಯನ್ನು ರೂಪಿಸಿಕೊಳ್ಳುತ್ತದೆ ಎಂದಷ್ಟೇ ಹೇಳಬಲ್ಲೆ ಎಂದು ಹೇಳುತ್ತಾರೆ.[೧೫]

"ಭಾವುಕತೆ ಇಲ್ಲದ ಭಾಷೆ ಸನ್ನಿವೇಶಗಳನ್ನು ಕಣ್ಣಿಗೆ ಹಾಗೆ ಬಿಡಿಸುವ ಚಿತ್ರಿಕ ಶಕ್ತಿ ಇವರಿಗೆ ಕರಗತವಾಗಿದೆ. ರಾಯಚೂರು ಪ್ರದೇಶದ ಉಪಭಾಷೆ, ಪ್ರಬೇಧಗಳ ದೃಷ್ಟಿಯಿಂದ ಕಥೆಗಳು ಮಹತ್ವದ್ದಾಗಿವೆ" ಎಂದು ವಿ.ಜಿ. ಪೂಜಾರ್ ಹೇಳುತ್ತಾರೆ.[೧೬]

ಒಟ್ಟಿನಲ್ಲಿ ಅಮರೇಶ ನುಗಡೋಣಿಯವರ ಕಥೆಗಳಲ್ಲಿ ದುರುಗ, ಕೆಂಪುಗ, ಶಿವಯ್ಯ, ವಜ್ರಪ್ಪ, ನಾಗಮ್ಮ, ತಿಮ್ಮಕ್ಕನವರ ಭಾಷೆ ಸೋತವರ ಪ್ರತೀಕವಾದರೆ ಶಾಂತಗೌಡ, ಶರಭನಗೌಡ, ಮಲ್ಲನಗೌಡರ ಭಾಷೆಯು ಜಮೀನ್ದಾರಿ ವ್ಯವಸ್ಥೆಯ ಗಟ್ಟಿತನವನನು ಹೇಳುತ್ತದೆ. ಇವರ ಕಥೆಗಳಲ್ಲಿ ಎಂತಹ ಭಾಷೆ ಬಳಸಬೇಕೆಂದು ಯೋಚಿಸದೇ ಗ್ರಾಮೀಣ ಬದುಕನ್ನು ತಮ್ಮದೇ ಆದ ಶೈಲಿಯಲ್ಲಿ ಕಟ್ಟಿಕೊಡುತ್ತಾರೆ. ಗ್ರಂಥಸ್ತ ಹಳ್ಳಿಭಾಷೆ, ಆಡುನುಡಿ ಯಾವುದನ್ನು ಎಷ್ಟು ಪ್ರಮಾಣದಲ್ಲಿ ಬಳಸಬೇಕೆಂದು ಮೊದಲೇ ಯೋಚಿಸಲಾರರು. ಅವರು ಕಥೆಗಳಲ್ಲಿ ಹಳ್ಳಿ ಪಾತ್ರಗಳು ಹೇಗೆ ಚಲಿಸುತ್ತವೆ ಎಂಬುದಕ್ಕೆ ಪೂರಕವಾಗಿ ಭಾಷೆಯನ್ನು ಬಳಸುತ್ತಾರೆ. ನಿರೂಪಣಾ ತಂತ್ರದಲ್ಲೂ ಸಹ ಹಳ್ಳಿಯ ಪರಿಸರವವನ್ನೇ ಅವಗಾಹನೆ ಮಾಡಿಕೊಂಡು ಕಥೆ ಹೇಳುತ್ತಾರೆ. ಅವರ ಕಥೆಗೆ ಹಳ್ಳಿ ಭಾಷೆಯೇ ಜೀವಾಳ. ಹೈದ್ರಾಬಾದ್, ಕರ್ನಾಟಕದ ಹಳ್ಳಿ ಭಾಷೆಯನ್ನೇ ಕಥಾ ಸಾಹಿತ್ಯದ ಪ್ರಮುಖ ಮಾಧ್ಯಮವಾಗಿ ಬಳಸಿಕೊಂಡಂತಹ ಮಹಾನ್ ಸೃಜನಶೀಲ ಲೇಖಕರಾಗಿದ್ದಾರೆ.

**ಅಡಿ ಟಿಪ್ಪಣಿಗಳು :**

೧. ಕರಿಗೋಡ ಬೀಚನಹಳ್ಳಿ : ವ್ಯಷ್ಟಿ ಮತ್ತು ಸಮಷ್ಟಿ ೧೯೯೧, ಪುಟ ೭೩

೨. ಗದ್ಯ ಶೈಲಿ ಲೇಖನ ಪುಟ ೧೭೦

೩. ಅರ್ಜುನಗೊಳಸೋಗಿ : ದಲಿತ ಸಾಹಿತ್ಯ ಸಮಾಲೋಕನ ೨೦೦೩ ಪುಟ ೬೪

೪. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ ಪುಟ ೪

೫. ಅದೇ ಪುಟ

೬. ದಾಳಿ ನಡೆದಾವೋ ಅಣ್ಣ ಕಥೆ, ಮುಸ್ಸಂಜೆಯ ಕಥಾನಕಗಳು ಸಂಕಲನ : ಪುಟ ೩೮

೭. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ : ಪುಟ ೨೭

೮. ಮಣ್ಣು ಸೇರಿತು ಬೀಜ ಮುನ್ನುಡಿ : ಪುಟ ೧೨೪

೯. ತಮಂಧದ ಕೇಡು ಕಥೆ, ತಮಂಧದ ಕೇಡು ಸಂಕಲನ ಪುಟ ೨೫

೧೦. ಪಕ್ಷಕ್ಕಲ್ಲದೆ ಪರಿಣಾಮ ಕಾಣಿಸದು ಕಥೆ, ಸವಾರಿ ಸಂಕಲನ : ಪುಟ ೨೦೫

೧೧. ದಾರಿಮೂಡಿಸುವ ಹೆಜ್ಜೆಗಳು, ಮಣ್ಣ ಸೇರಿತು ಬೀಜ ಸಂಕಲನ : ಪುಟ ೨೧೭

೧೨. ಮಣ್ಣು ಸೇರಿತು ಬೀಜ ಕಥೆ, ಅದೇ ಸಂಕಲನ : ಪುಟ ೯

೧೩. ತಮಂಧದ ಕೇಡು ಸಂಕಲನದ ಮುನ್ನುಡಿ ಪುಟ : ೧೩

೧೪. ಮಯೂರ ಪತ್ರಿಕೆ ಉಲ್ಲೇಖ ಜುಲೈ ೨೦೦೮

೧೫. ಸವಾರಿ ಸಂಕಲನ ಮುನ್ನುಡಿ ಪುಟ ೧೨

೧೬. ನಿತ್ಯ ನೂತನ ಪತ್ರಿಕೆ ೧೯೯೨

# ಅಧ್ಯಾಯ – ೭

# ಸಮಾರೋಪ

ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣ ಕಥೆ ಪ್ರಕಾರ ವೈವಿಧ್ಯಮಯವಾದುದು. ನವೋದಯ ಪ್ರಗತಿಶೀಲ ನವ್ಯಕ್ಕಿಂತಲೂ ತೀರಾ ಭಿನ್ನವಾದದ್ದು ದಲಿತ ಬಂಡಾಯ ಸಾಹಿತ್ಯವಾಗಿದೆ. ದಲಿತ ಸಾಹಿತ್ಯವು ನಮ್ಮ ಕನ್ನಡ ಸಾಹಿತ್ಯ ಲೋಕದಲ್ಲಿ ಹೊಸ ಅಭಿವ್ಯಕ್ತಿ ಕ್ರಮವಾಗಿ ಬೆಳೆದು ಬಂದಿದೆ. ಅದು ಈಗಲೂ ಪ್ರಸ್ತುತವಾಗಿದೆ. ಅದು ಮತ್ತಷ್ಟು ಪ್ರಗತಿಯಾಗಿ ತನ್ನ ಫಲಿತವನ್ನು ಕಂಡುಕೊಳ್ಳಬೇಕಾಗಿದೆ. ದಲಿತರ ಜೀವನದ ಸಂಕಟವನ್ನು ಕಥೆ, ಕಾವ್ಯ, ಕಾದಂಬರಿ ಹೀಗೆ ಹಲವು ಪ್ರಕಾರಗಳಲ್ಲಿ ದಲಿತ ಸಾಹಿತಿಗಳು ಅಭಿವ್ಯಕ್ತಿಗೊಳಿಸಿದ್ದಾರೆ. ಹಾಗೆಯೇ ದಲಿತ ಸಂವೇದನೆಗಳನ್ನು ದಲಿತೇತರ ಸಾಹಿತಿಯಾದ ಅಮರೇಶ ನುಗಡೋಣಿಯವರು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಹಾಗಾಗಿ ಅವರನ್ನು ಪ್ರಮುಖ ಕಥೆಗಾರರೆಂದೇ ಪರಿಗಣಿಸಲಾಗಿದೆ. ನುಗಡೋಣಿಯವರ ಕಥೆಗಳಲ್ಲಿರುವ ವಸ್ತು ವೈವಿಧ್ಯತೆ, ತಂತ್ರ ಶೈಲಿ, ಭಾಷೆ, ಪಾತ್ರಗಳ ಪ್ರಾಮುಖ್ಯತೆಯನ್ನು, ಪ್ರಾದೇಶಿಕ ಪ್ರೀತಿಯನ್ನು ಜೀವಪರ ಕಾಳಜಿಯನ್ನು ವಿಶ್ಲೇಷಿಸುವುದೇ ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಅಮರೇಶ ನುಗಡೋಣಿಯವರ ಕಥಾ ಸಾಹಿತ್ಯ ಹೈದ್ರಾಬಾದ್ ಕರ್ನಾಟಕದ ಫ್ಯೂಡಲ್ ಲೋಕದಲ್ಲಿರುವ ಹಿಂದುಳಿದವರ ನೋವು, ಹತಾಶೆ, ಸಂಕಟ, ದುಃಖ ಹಾಗೂ ಮೇಲ್ವರ್ಗದವರ ಜಾತಿನಿಂದನೆಗಳು ಶೋಷಣೆಯನ್ನು ಪ್ರತಿನಿಧಿಸುತ್ತದೆ. ಜಾಗತೀಕರಣದ ಸಂದರ್ಭದಲ್ಲಿನ ಸಮಾಜದ ಅನೇಕ ಸಹಜ ತೊಡಕುಗಳನ್ನು ಮುಖಾಮುಖಿಯಾಗಿಸುವಿಕೆಯಲ್ಲಿ ಅಮರೇಶರ ಪಾತ್ರ ಹಿರಿದಾದು.

ಅವರು ತನ್ನ ಸುತ್ತಮುತ್ತಲಿನ ಪ್ರಪಂಚವನ್ನು ಸೂಕ್ಷ್ಮಾತೀಸೂಕ್ಷ್ಮವಾಗಿ ಗಮನಿಸಿ ದಾಖಲಿಸುತ್ತಾರೆ. ಈ ಪ್ರಬಂಧದಲ್ಲಿ ಪ್ರಮುಖವಾಗಿ ನುಗಡೋಣಿಯವರ ವೈಯಕ್ತಿಕ ಜೀವನ ಬೆಳೆದ ಬಂದ ಪರಿಸರದ ಪ್ರಭಾವಗಳ ಹಿನ್ನೆಲೆಯಲ್ಲಿ ಸಾಹಿತ್ಯ ಕೃಷಿಗೆ ದೊರಕಿದ ಪ್ರೇರಣೆಗಳನ್ನು ಸಾಧ್ಯವಾದಷ್ಟು ಪರಾಮರ್ಶನ ಗ್ರಂಥಗಳ ಆಧಾರದ ಮೂಲಕ ಗುರುತಿಸುವ ಪ್ರಯತ್ನಇಡಲಾಗಿದೆ.

ಅಮರೇಶ ನುಗಡೋಣಿಯವರು ಬರೆದ ನಾಲ್ಕು ಕಥಾಸಂಕಲನಗಳ ಕಥೆಗಳನ್ನು ಸಮಗ್ರವಾಗಿ ಓದಿ ಅರ್ಥೈಯಿಸಿ ವಿಶ್ಲೇಷಿಸುವ ಪ್ರಮಾಣಿಕ ಪ್ರಯತ್ನ ಇದಾಗಿದೆ. ಇದಕ್ಕೆ ಪೂರಕವಾಗಿ ಪ್ರಾರಂಭಿಕ ಹಂತದಲ್ಲಿ ಕನ್ನಡ ಸಾಹಿತ್ಯ ಪರಂಪರೆಯನ್ನು ದಲಿತ ಬಂಡಾಯ ಸಾಹಿತ್ಯ ಬೆಳೆದು ಬಂದ ಬಗೆಯನ್ನು ಸ್ಥೂಲವಾಗಿ ವಿಶ್ಲೇಷಿಸಲಾಗಿದೆ. ದಲಿತ ಸಾಹಿತ್ಯದ ಎಲ್ಲ ಅಂಶಗಳೂ ನುಗಡೋಣಿಯವರ ಕಥೆಗಳಲ್ಲಿ ಅನನ್ಯವಾಗಿ ದಾಖಲಿಸಲ್ಪಟ್ಟಿವೆ. ದಲಿತ ಸಾಹಿತ್ಯವು ಪುಸ್ತಕ ಸಾಹಿತ್ಯವಾಗಿ ಹಾಗೆಯೇ ತತ್ವ ಸಿದ್ಧಾಂತಗಳಿಗೆ ಬದ್ಧವಾಗಿ ಬೆಳೆದು ಬಂದ ಜೀವಪರ ಕಾಳಜಿಯನ್ನು ಬರಹ ಇವರದಾಗಿದೆ.

ನುಗಡೋಣಿ ಅವರ ಕಥೆಗಳಲ್ಲಿ ಸಂಪ್ರದಾಯಿಕ ಸಮಾಜದಲ್ಲಿ ಎಬ್ಬಿಸಿರುವ ತಲ್ಲಣಗಳು ಈ ತಲ್ಲಣಗಳ ಪರಿಣಾಮಗಳುವೇ ಮಾತ್ರವಾಗಿರುವುದಿಲ್ಲ. ಹೊತ್ತಿ ಉರಿಯುತ್ತಿರುವ ತಾಣಗಳಿಂದಲೇ ಬಂದವರಾದ ಸ್ತ್ರಿಯರು, ದಲಿತರು, ತಮ್ಮ ಸಮುದಾಯಗಳ ಸಂವೇದನೆಗಳನ್ನು ಅನುಭವಗಳನ್ನು ಅಭಿವ್ಯಕ್ತಿಸಬಲ್ಲವರು. ಇವರ ಕಥೆಗಳಲ್ಲಿ ದಲಿತ ಚಳುವಳಿಯ, ಆಶಯಗಳು ಸಮರ್ಥವಾಗಿ ಬಿಂಬಿಸಲ್ಪಟ್ಟಿವೆ. ಶಾಂತರಸ, ಚೆನ್ನಣ್ಣವಾಲಿಕರ, ಗೀತನಾಗಭೂಷಣರ ಧೋರಣೆಗಳನ್ನು ಇವರು ಹೊಂದಿದ್ದರು ಅವರದ್ದೇ ಆದ ವಿಭಿನ್ನತೆ ಅವರ ಕಥೆಗಳಲ್ಲಿ ಕಂಡು ಬರುತ್ತದೆ.

ನನ್ನ ಅಧ್ಯಯನದಲ್ಲಿ ಒಟ್ಟು ನಾಲ್ಕು ಕಥಾ ಸಂಕಲನಗಳನ್ನು ಸಮೀಕ್ಷಿಸಿ ಅಮರೇಶ ನುಗಡೋಣಿಯವರ ಕಥೆಗಳು ಒಂದು ಅವಲೋಕನ ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಮಾಡಲು ಮುಂದಾದೆ. ನುಗಡೋಣಿಯವರ ದಟ್ಟವಾದ ಜೀವನ ಅನುಭವಗಳು ನೈಜವಾದ ವ್ಯಕ್ತಿತ್ವವನ್ನು ನೋಡಬಹುದು. ದಲಿತರ ನೋವು, ಸಂಕಟಗಳನ್ನು ಸ್ವತಃ ಅವರೇ ಅನುಭವಿಸಿದವರಂತೆ ಓದುಗರ ಮನಕಲುಕುವಂತಹ ಚಿತ್ರಣ, ಲೋಕದಲ್ಲಿ ಕಂಡದ್ದನ್ನು ಅತ್ಯಂತ ನಿರೂಪಣಾ ಶೈಲಿಯಲ್ಲಿ ಹೊಸ ರೂಪ ಕೊಟ್ಟ ರಮ್ಯ ಶೈಲಿಯಾಗಿದೆ.

ನುಗಡೋಣಿಯವರ ಕಥಾ ಸಂಕಲನಗಳಲ್ಲಿನ ವಸ್ತು ವೈವಿಧ್ಯತೆಯಲ್ಲಿ ತಣ್ಣನೆಯ ಪ್ರತಿಭಟನೆಗಳು, ಉಗ್ರವಾದ ಪ್ರತಿಭಟನೆಗಳು, ಜಾತಿ ವರ್ಗ ಸಂಘರ್ಷ, ಹಿಂದುಳಿದವರ ಮಹಿಳೆಯರ ಶೋಷಣೆ, ಬಡವರ ಆಸ್ತಿಯ ಕಬಳಿಕೆ, ನಿಂದನೆ, ಬಡವರ ಸಾವು ನೋವುಗಳನ್ನು ವೀರ್ಯವತ್ತಾಗಿ ಚಿತ್ರಿಸಿದ್ದಾರೆ. ಧಾರ್ಮಿಕ ನಂಬಿಕೆಗೆ ಪಾತಪ್ಪ ದೇವರ ನಂಬಿಕೆ, ಶಿವನಕೊಳ್ಳದ ಮಹಿಮೆ, ಕೊಡಕಲ್ಲು ಸಾರುವಯ್ಯನ ಪವಾಡಗಳು ಉದಾರಿಸಬಹುದು.

ಅವು ಪ್ರಾದೇಶಿಕ ನೆಲೆಯಲ್ಲಿ ಮಾತ್ರವಲ್ಲದೆ ನುಗಡೋಣಿಯವರ ಕಥೆಯಲ್ಲಿನ ಧಾರ್ಮಿಕ ಆಚರಣೆಗಳಾಗಿ ನನ್ನ ಪ್ರಬಂಧಕ್ಕೆ ವಸ್ತುವಾಗಿ ಅನನ್ಯತೆಯನ್ನು ಪಡೆದಿದೆ. ಮನುಷ್ಯ ಸಂಬಂಧಗಳು ಸುಗುಣವಾಗಿಯೂ, ನಿರ್ಗುಣವಾಗಿಯೂ ಕಂಡುಬಂದಿವೆ. ಹಿಂದುಳಿದ ಮಹಿಳೆಯನ್ನು ಲೈಂಗಿಕ ಪ್ರಕ್ರಿಯೆಯಲ್ಲಿ ಶೋಷಿಸುವ ಬಗೆ, ಪುರುಷ ಪ್ರಧಾನ ಸಮಾಜದ ವಿಷಯ ಲಂಪಟತನ, ಗಂಡು ಹೆಣ್ಣಿನ ನಡುವಣ ಸಂಬಂಧದ ಭಿನ್ನ ನೆಲೆಗಳನ್ನು ಇವರ ಕಥೆಗಳು ಸ್ಪರ್ಶಿಸುವ ರೀತಿಗೆ ನುಗಡೋಣಿಯವರು ತಮ್ಮ ಕಥೆಯಲ್ಲಿ ಸಾಮಾಜಿಕ ಅರ್ಥ ಕೊಡುವ ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ 'ಒತ್ತೆ' ಕಥೆಯ ರಾಚಪ್ಪ ಮತ್ತು ದೇವಕಿ ಸಂಬಂಧ. ತಮಂದದ ಕೇಡು ಕಥೆಯ ಶಾಂತಗೌಡ ಚಂದವ್ವಳ ಸಂಬಂಧ, ಹೊತ್ತು ಮೂಡುವ ಸಮಯ ಕಥೆಯ ಅಕ್ಕಮ್ಮ ಲಿಂಗನ ಸಂಬಂಧವನ್ನು ಉದಾರಿಸಬಹುದು. ಅಷ್ಟೇ

ಅಲ್ಲದೆ ಸಮಾಜ ಸುಧಾರಕರಾದ ಬಸವಣ್ಣನವರ ಪ್ರಭಾರ, ಅಂಬೇಡ್ಕರರ ನಿಲುವುಗಳು, ಕಾರ್ಲ್‌ಮಾರ್ಕ್ಸ್‌ನ ಕ್ರಾಂತಿಕಾರಿ ಮನೋಭಾವ ಇವರ ಕಥೆಗಳಲ್ಲಿ ಇನ್ನಷ್ಟು ಜೀವ ತುಂಬಿದವುಗಳಾಗಿವೆ. ಈ ರೀತಿ ಸಮಗ್ರವಾದ ವಸ್ತು ವಿಶಿಷ್ಟತೆ ಅವರ ಕಥೆಗಳಲ್ಲಿ ವಸ್ತು ನಿರೂಪಣೆಯನ್ನು ಅಭಿವ್ಯಕ್ತಿ ಕ್ರಮವನ್ನು ಕೃತಿ ನಿಷ್ಠವಾಗಿ ಪರಿಶೀಲಿಸಲಾಗಿದೆ.

ನುಗಡೋಣಿಯವರ ಕಥೆಗಳಿಗೆ ಬಾಲ್ಯದ ಅನುಭವಗಳೇ ಪ್ರೇರಣೆ. ಊರುಕೇರಿಯ ಮತ್ತು ಊರಿನ ಸರಹದ್ದು ಮುಂತಾದ ವಲಯಗಳಿಂದ ದೊರಕಿದ ಪ್ರೇರಣೆಗಳನ್ನು ಕಥೆಗಳಲ್ಲಿ ಮರುಸೃಷ್ಟಿ ಮಾಡಿದ್ದಾರೆ. ಜಾಗತೀಕರಣದ ದಾಳಿಗೆ ಸಿಲುಕಿದ ಜನರ ಜೀವ ಶೈಲಿಯೇ ಬದಲಾದ ರೀತಿಯನ್ನು ಪ್ರಾದೇಶಿಕ ಪ್ರೀತಿಯಿಂದ ಚೌಕಟ್ಟಿನೊಳಗೆ ಇರುವ ಅನೇಕ ಪ್ರಸಂಗಗಳನ್ನು ತಮ್ಮ ಕಥನದಲ್ಲಿ ಅಭಿವ್ಯಕ್ತಿಸಿದ್ದಾರೆ. ಇದಕ್ಕೆ ಬದ್ಧವಾದ ತಾತ್ವಿಕ ಮತ್ತು ಸೈದ್ಧಾಂತಿಕ ದೃಷ್ಟಿಕೋನಗಳ ಶೋಧನೆಯನ್ನು ಮಾಡಿದ್ದಾರೆ.

ಅಮರೇಶ ನುಗಡೋಣಿಯವರ ಕಥೆಗಳಲ್ಲಿ ಬರುವ ಪಾತ್ರಗಳು ಕೆಳಜಾತಿಯ ಸಂಸ್ಕೃತಿಯನ್ನು ಪ್ರತಿನಿಧಿಸುತ್ತಲೇ ಮೇಲ್ಜಾತಿಯ ಪ್ರಧಾನ ಸಂಸ್ಕೃತಿಯನ್ನು ವಿರೋಧಿಸುತ್ತವೆ. ಪಾತ್ರಗಳು ಭಿನ್ನಭಿನ್ನ ಸ್ವರೂಪ ಹೊಂದಿವೆ. ಜಾತಿ ವರ್ಗ ಸಂಘರ್ಷವು ಪುರುಷ ಪಾತ್ರಗಳಲ್ಲಿಯೂ, ಸ್ತ್ರೀ ಪಾತ್ರಗಳಲ್ಲಿಯೂ ವ್ಯಕ್ತವಾಗುತ್ತವೆ. ಹೀಗೆ ದಲಿತ ಪಾತ್ರಗಳು ದಲಿತರ ಜೀವನ ವಿಧಾನವನ್ನು ನಿರೂಪಿಸುತ್ತವೆ. ಈ ಅಧ್ಯಯನದಲ್ಲಿ ಕೆಲವು ಪಾತ್ರವನ್ನು ಒಂದೊಂದಾಗಿ ನವೀರಾಗಿ ವಿಶ್ಲೇಷಿಸಲಾಗಿದೆ.

ಹಾಗೆಯೇ ಇವರು ಕಥೆಗಳಲ್ಲಿ ಎಂತಹ ಭಾಷೆ ಬಳಸಬೇಕೆಂದು ಮೊದಲೇ ನಿರ್ಣಯಿಸದೆ ಉತ್ತರ ಕರ್ನಾಟಕದ ಗ್ರಾಮೀಣ ಬದುಕನ್ನು ತಮ್ಮದೇ ಆದ ಶೈಲಿಯಲ್ಲಿ ಕಟ್ಟಿಕೊಡುತ್ತಾರೆ. ಗ್ರಂಥಸ್ತ ಭಾಷೆ, ಹಳ್ಳಿ ಭಾಷೆ, ಆಡುನುಡಿಗಳು ಸಾಕಷ್ಟು ಪ್ರಮಾಣದಲ್ಲಿ ಕಥೆಗೆ ಪೂರಕವಾಗಿ ಬಳಸಿಕೊಂಡಿದ್ದಾರೆ. ಅತ್ಯಂತ ರಮಣೀಯವಾಗಿ ತಮ್ಮ ಸುತ್ತಲಿನ ಪರಿಸರವನ್ನು ಕಥೆಯ ನಿರೂಪಣಾ ತಂತ್ರವಾಗಿ ಬಳಸಿಕೊಂಡಿದ್ದಾರೆ. ಹೀಗೆ ಅವರ ಭಾಷೆ ಮತ್ತು ಶೈಲಿ ತಂತ್ರದ ಬಳಕೆಗಳನ್ನು ಸಹ ಕೃತಿ ನಿಷ್ಠವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ದಲಿತರ ಮೇಲೆ ನಡೆಯುವ ದಬ್ಬಾಳಿಕೆ, ದಲಿತರ ಸಂಕಟ, ಹತಾಶೆ, ಲಿಂಗತಾರತಮ್ಯ ಸ್ತ್ರೀ ಶೋಷಣೆ ಮುಂತಾದವುಗಳ ಬಗ್ಗೆ ಸ್ಪಷ್ಟವಾದ ಒಳದನಿಯಿದೆ.

ನುಗಡೋಣಿಯವರ ಕಥಾ ಸಾಹಿತ್ಯದ ವಸ್ತು ಮತ್ತು ಕಥಾ ಸಂರಚನೆಯಲ್ಲಿ ಸಾಕಷ್ಟು ವೈವಿಧ್ಯತೆ ಕಂಡು ಬರುತ್ತದೆ. ಒಂದೊಂದು ಕಥೆಯು ದಲಿತರ, ಬಡವರ, ಬದುಕಿನ ಬೇರೆಬೇರೆ ಮುಖಗಳನ್ನು ಪರಿಚಯಿಸುತ್ತವೆ. ಲೇಖಕರ ಅಂತರ್‌ದೃಷ್ಟಿ ಮತ್ತು ಸೂಕ್ಷ್ಮ ಗ್ರಹಿಕೆಯ ಮನೋಭಾವದಿಂದ ಗ್ರಾಮೀಣ ಸೊಗಡನ್ನು ತಾಜಾವಾಗಿಟ್ಟುಕೊಂಡು ಪ್ರಸ್ತುತಪಡಿಸುತ್ತಾರೆ.

ಮಣ್ಣ ಸೇರಿತು ಬೀಜ ಮುನ್ನುಡಿಯಲ್ಲಿ ಪುರುಷೋತ್ತಮ ಬಿಳಿಮಲೆಯವರು ನವೋದಯ ಕಥೆಗಳ ಭಾವಗೀತಾತ್ಮಕತೆ ನವ್ಯ ಕಥೆಗಳ ಆಕೃತಿ ಸೂಕ್ಷ್ಮತೆ ಮತ್ತು ಬಂಡಾಯ ಕಥೆಗಳ ಜನಪರತೆಯನ್ನು ಅವರು ತಮ್ಮ ಕಥೆಯಲ್ಲಿ ಉಳಿಸಿಕೊಂಡಿದ್ದಾರೆ. ಈ ಅರ್ಥದಲ್ಲಿ ಅಮರೇಶ ನುಗಡೋಣಿಯವರು ಸಣ್ಣ ಕಥೆಗಳ ಪರಂಪರೆಯ ಸಮರ್ಥ ಉತ್ತರಾಧಿಕಾರಿಯಾಗಿದ್ದಾರೆ.

ಒಟ್ಟಾರೆಯಾಗಿ ದಲಿತರ, ನೊಂದವರ ಜೀವನವನ್ನು ಇದ್ದಂತೆಯೇ ಹೇಳುವ ಮೂಲಕ ದಲಿತರ ಶೋಚನೀಯ ಸ್ಥಿತಿಯನ್ನು ಸಹೃದಯರಿಗೆ ಮನದಟ್ಟು ಮಾಡಿಕೊಡುವುದೇ ನುಗಡೋಣಿಯವರ ಬರಪದ ಉದ್ದೇಶ. ಈ ಸದುದ್ದೇಶದಿಂದ ರಚಿತವಾದ ಅವರ ಕಥೆಗಳು ಹೈದ್ರಾಬಾದ್ ಕರ್ನಾಟಕ ಭಾಗದ ದಲಿತ ಸಾಹಿತ್ಯಕ್ಕೆ ಹೊಸದಿಕ್ಕನ್ನು ತೋರಿಸಿವೆ. ಹಾಗಾಗಿ ಅಮರೇಶ ನುಗಡೋಣಿಯವರು ಮಹತ್ವದ ಕಥೆಗಾರರಾಗಿದ್ದಾರೆ. ಅವರ ಕಥೆಗಳಲ್ಲಿ ಹೈದ್ರಾಬಾದ್ ಕರ್ನಾಟಕದ ಸಂಸ್ಕೃತಿಯೇ ಜೀವತಳದಂತಿದೆ. ಅವರ ಕಥೆಗಳು ಬಿರುಬಿಸಿಲಿನಲ್ಲಿ ಅರಳಿದ ಕುಸುಮಗಳಾಗಿವೆ ಎಂದರೆ ಅತಿಶಯೋಕ್ತಿಯಾಗದು.

# ಮೂಲ ಆಕರಗಳು

೦೧. ತಮಂಧದ ಕೇಡು : ಧಾತ್ರಿ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೮ (೨ನೇ ಮುದ್ರಣ)

೦೨. ಮಣ್ಣು ಸೇರಿತು ಬೀಜ : ನಮ್ಮ ಪ್ರಕಾಶನ, ತಿಪಟೂರು, ೧೯೯೭

೦೩. ಮುಸ್ಸಂಜೆ ಕಥಾನಕಗಳು : ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೦೪. ಸವಾರಿ : ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು, ೨೦೦೭

# ಪರಾಮರ್ಶನ ಗ್ರಂಥಗಳು

೦೧. ಅರ್ಜುನ ಗೋಳಸಂಗಿ : ಕನ್ನಡ ದಲಿತ ಸಾಹಿತ್ಯ ಸಮಾಲೋಕನ, ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು, ೨೦೦೩

೦೨. ಕೋದಂಡರಾಮ ಎಸ್.ಕೆ.: ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯಿತ್ರಿ ಸ್ಮಾರಕ ಗ್ರಂಥಮಾಲೆ, ೧ನೇ ಮುದ್ರಣ ೧೯೯೬

೦೩. ಚಂದ್ರಶೇಖರ್ ಟಿ.ಆರ್.: ದಲಿತ ಅಧ್ಯಯನ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ೧ನೇ ಮುದ್ರಣ ಹಂಪಿ

೦೪. ನಾಯಕ ಜಿ.ಹೆಚ್. : ಶತಮಾನದ ಕನ್ನಡ ಸಾಹಿತ್ಯ, ಶ್ರೀ ರಾಘವೇಂದ್ರ ಮುದ್ರಣ ಮತ್ತು ಪ್ರಕಾಶನ, ಅಂಕೋಲ, ೧ನೇ ಮುದ್ರಣ ೨೦೦೯

೦೫. ಪುರುಷೋತ್ತಮ ಬಿಳಿಮಲೆ : ಬಂಡಾಯ ದಲಿತ ಸಾಹಿತ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೩

೦೬. ಬರಗೂರು ರಾಮಚಂದ್ರಪ್ಪ: ಬಂಡಾಯ ಸಾಹಿತ್ಯ ಮೀಮಾಂಸೆ, ಅನ್ವೇಷಣೆ ಪ್ರಕಾಶನ, ಬೆಂಗಳೂರು ೧೯೯೧

೦೭. ಮೊಗಳಿ ಗಣೇಶ್ : ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೮. ಪಿ. ಮಹದೇವಯ್ಯ : ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೦೯. ಎಲ್.ಎಸ್. ಶೇಷಗಿರಿರಾವ್ : ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪ್ರಕಾಶನ, ಬೆಂಗಳೂರು ೨೦೦೫